# ಸಿದ್ಧಗಂಗಾ



ಜನವರಿ, ೧೯೭೪

# ಕೃತಜ್ಞತೆಗಳು

ಹೊಸ ವರ್ಷದ ಸನ್ಮಾನ್ಯ ಓದುಗರಿಗೆಲ್ಲಾ ಹೃತ್ಪೂರ್ವಕ ವಂದನೆಗಳು.

ಶ್ರೀ ಕ್ಷೇತ್ರದ ಅಭಿಮಾನಿಗಳು ಮತ್ತು ಸೇವಾಕಾಂಕ್ಷಿಗಳಾದ ಮೈಸೂರಿನ ಶ್ರೀ ಕೆ. ಎಸ್. ಬಸವಲಿಂಗಪ್ಪನವರು 'ಸಿದ್ಧಗಂಗಾ' ಪತ್ರಿಕೆಯನ್ನು ನಾಡಿನ ಅನೇಕ ಭಾಗಗಳಲ್ಲಿ ಬೆಳಕಿಗೆ ತರಲು ಹತ್ತಾರು ವರ್ಷಗಳಿಂದ ಶ್ರಮವಹಿಸಿ ನೆರವಾಗುತ್ತಿದ್ದಾರೆ.

ಶ್ರೀ ಮಠದ ಮೇಲಿನ ಗೌರವಾದರಗಳಿಂದ ಇವರ ಜೊತೆಯಲ್ಲಿ ಮೈಸೂರು, ಟಿ. ನರಸೀಪುರ, ಎಳಂದೂರು, ದಾವಣಗೆರೆ, ಹರಿಹರ, ರಾಣಿಬೆನ್ನೂರು, ಶಿವಮೊಗ್ಗ, ಚಿಕ್ಕಮಗಳೂರು ಇನ್ನೂ ಕೆಲವು ಸ್ಥಳಗಳಲ್ಲಿ ಅನೇಕ ಬಂಧುಗಳು ಓದುಗರನ್ನು ಅಧಿಕ ಸಂಖ್ಯೆಯಲ್ಲಿ ಮಾಡಲು ಸಹಕರಿಸಿ ಪ್ರೋತ್ಸಾಹ ನೀಡಿದ್ದಾರೆ. ಅವರೆಲ್ಲರಿಗೂ ಶ್ರೀ ಮಠದ ಪರವಾಗಿ ಮತ್ತು ಶ್ರೀ ಕೆ. ಎಸ್. ಬಸವಲಿಂಗಪ್ಪನವರ ಪರವಾಗಿ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

ಪತ್ರಿಕೆಯ ಸಂಪಾದಕರಾಗಿ ಎರಡು ವರ್ಷಗಳಿಂದ ಉತ್ತಮ ಸೇವೆಸಲ್ಲಿಸಿದ ಶ್ರೀ ಕೆ. ಜಿ. ರಂಗಯ್ಯನವರಿಗೆ ಹೃತ್ಪೂರ್ವಕ ಧನ್ಯವಾದಗಳು.

ಕೆಲವು ಅನಿವಾರ್ಯ ಕಾರಣಗಳಿಂದಾಗಿ ಜನವರಿ ಸಂಚಿಕೆ ವಿಳಂಬವಾಗಿ ಓದುಗರ ಕೈ ಸೇರುತ್ತಿದೆ. ಸಹೃದಯ ಓದುಗ ಬಂಧುಗಳು ಸಹಕರಿಸಬೇಕಾಗಿ ವಿನಂತಿ.

-ಪ್ರಕಾಶಕರು

## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಅಜೀವ ಸದಸ್ಯರ ಬಳಗ

397. ಶ್ರೀ ಮೋಹನ್‌ಲಾಲ್ ಕಂತನ್
ಮಹಾವೀರ ಪ್ರಿಂಟರ್ಸ್,
ಚಿಕ್ಕಪೇಟೆ, ಬೆಂಗಳೂರು-53

398. ಶ್ರೀ ಟಿ. ವಿ. ನರಸಿಂಹಯ್ಯ
ಆಂಜನೇಯ ಟೆಂಪಲ್ ಸ್ಟ್ರೀಟ್,
ಲಿಂಗಸೆಟ್ಟಿಪೇಟೆ, ಬೆಂಗಳೂರು-2

399. ಶ್ರೀ ಜಿ. ಚಿಕ್ಕಹನುಮಂತಯ್ಯ
ಕಬ್ಬನ್‌ಪೇಟೆ, ಬೆಂಗಳೂರು-2

400. ಶ್ರೀ ಎಂ. ಎಸ್. ಪಾಪಣ್ಣ
ಸುಲ್ತಾನ್‌ಪೇಟೆ, ಬೆಂಗಳೂರು-53

401. ಶ್ರೀ ಬಿ. ಎಸ್. ಮಹದೇವಯ್ಯ, ಎಂ.ಎ.,
ಸಂಸ್ಕೃತ ಉಪನ್ಯಾಸಕರು,
ಸರ್ಕಾರಿ ಕಾಲೇಜು, ಚಿತ್ರದುರ್ಗ

402. ಶ್ರೀ ಎಸ್. ಚಂದ್ರಶೇಖರ್‌ಮಠ್,
ಅಸಿಸ್ಟೆಂಟ್ ಇಂಜಿನಿಯರ್, ಬೆಳಗಾಂ.

403. ಶ್ರೀ ಚನ್ನಬಸವಯ್ಯ ತೆಲಸಂಗ
ಸ್ವದೇಶಿ ವಸ್ತ್ರ ಭಂಡಾರ,
ಅಥಣಿ, ಬೆಳಗಾಂ ಜಿಲ್ಲೆ

404. ಶ್ರೀ ಚುರುಮುರಿ ಬ್ರದರ್ಸ್,
ಕ್ಲಾತ್‌ಮರ್ಚೆಂಟ್ಸ್
ಅಥಣಿ, ಬೆಳಗಾಂ ಜಿಲ್ಲೆ



# ಶ್ರೀವಾಣಿ

ಭರತಖಂಡ ಜಗತ್ತಿಗೆ ಬೆಳಕನ್ನು ಕೊಟ್ಟಂತಹ ರಾಷ್ಟ್ರ. ಮಾನವನ ಉದ್ಧಾರದ ಪಥವನ್ನು ತೋರಿದ ದೇಶ. ಇದು ಅಭಿಮಾನದ ಮಾತಲ್ಲ; ಪಾಶ್ಚಿಮಾತ್ಯ ಸತ್ಯಶೋಧಕರೂ ಇದನ್ನು ಬಿಚ್ಚು ಹೃದಯದಿಂದ ಹೊಗಳಿದ್ದಾರೆ. ಇಂತಹ ಶಕ್ತಿ ಸಂಪಾದನೆ ಭರತಖಂಡದವರಿಗೆ ಎಲ್ಲಿಂದ ಬಂತು ಎಂಬ ಪ್ರಶ್ನೆ ಉದಯವಾದಾಗ, ಸ್ಪಷ್ಟವಾದ ಉತ್ತರ, ಸಂಸ್ಕೃತ ಭಾಷೆ ಆ ಎಲ್ಲಾ ಶಕ್ತಿಗಳನ್ನು ಕೊಡುತ್ತದೆಂಬುದು. ನಮ್ಮ ಹಿಂದಿನ ಪುಣ್ಯಾತ್ಮರು ಕೇವಲ ಉದರ ನಿಮಿತ್ತಕ್ಕಾಗಿ ಸಂಸ್ಕೃತವನ್ನು ಕಲಿತವರಲ್ಲ; ಜ್ಞಾನ ಸಂಪಾದನೆ ಅವರ ಪರಮಧ್ಯೇಯವಾಗಿತ್ತು. ಆದ್ದರಿಂದ ಅವರು ದೇವದೇವನ ಸಾಕ್ಷಾತ್ಕಾರಕ್ಕಾಗಿ ಆತ್ಮವಿದ್ಯೆಯನ್ನು ಕಲಿಯುತ್ತಿದ್ದರು. ಮಾನವನು ಇಂದು ಅಧಿಕಾರ, ಸಂಪತ್ತು ಮತ್ತು ಭೋಗಜೀವನವೆಂಬ ದಾಹತ್ರಯಗಳಿಗೆ ದಾಸನಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಪಶುಪಕ್ಷಿಗಳಂತೆ ಜೀವಿಕೆಯನ್ನು ಸಾಗಿಸುತ್ತಿದ್ದಾನೆ. ಇದೇ ಪರಿಸ್ಥಿತಿ ಮುಂದುವರಿದರೆ ಜಗತ್ತು ವಿನಾಶದ ಹೆದ್ದಾರಿಯನ್ನು ತುಳಿಯಬೇಕಾಗುವುದು. ಮಾನವನು ಮಂಗಳವನ್ನು ಕಾಣಬೇಕಾದರೆ, ಜಗತ್ತು ಸುಖಶಾಂತಿಗಳಿಂದ ತುಂಬಿ ಬಾಳಬೇಕಾದರೆ, ಶೀಘ್ರವಾಗಿ ಧರ್ಮದ ಜಾಗೃತಿಯುಂಟಾಗಬೇಕು. ಈ ಉದ್ದೇಶ ಸಾಧನೆಗೆ ಸಂಸ್ಕೃತ ಭಾಷೆಯ ಅಧ್ಯಯನವೇ ಪರಮ ಆಧಾರ.

# ‘ಸಿದ್ಧಗಂಗಾ’

ಜನವರಿ, ೧೯೭೮

ಸಂಪುಟ-೧೪ ಸಂಚಿಕೆ-೧



ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ



ಚಂದಾ ವಿವರ
ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಮುಖಪುಟ

ಸಂಸ್ಕೃತ ದಿನೋತ್ಸವ ಸಮಾರಂಭದಲ್ಲಿ ಶ್ರೀ ಶ್ರೀ ಗಳವರು ಸಂಸ್ಕೃತ ಭಾಷೆಯ ಮಹತ್ವವನ್ನು ಕುರಿತು ಮಾತಾಡುತ್ತಿರುವುದು.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಅಗ್ಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ

# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

**ವಿದ್ಯಾ ಮಿತ್ರಂ ಪ್ರವಾಸೇಷು ಭಾರ್ಯಾ ಮಿತ್ರಂ ಗೃಹೇಷು ಚ।**
**ವ್ಯಾಧಿಸ್ತಸ್ಯೌಷಧಂ ಮಿತ್ರಂ ಧರ್ಮೋ ಮಿತ್ರಂ ಮೃತಸ್ಯ ಚ॥**

ಪ್ರವಾಸದಲ್ಲಿರಲು ವಿದ್ಯೆ ನಿನಗಾಪ್ತ ಸಖ
ನಿವಾಸದಲ್ಲಿ ನಿನಗೆ ಪತ್ನಿಯೇ ಗೆಳತಿ.
ರೋಗಿಗಾದರೊ ಸಖನು ಔಷಧಿಯು ತಾನು
ಸತ್ತವನಿಗಾಪ್ತ ಸಖ ಧರ್ಮ ತಾನು.

§§ ★ §§

**ಅಲಸಸ್ಯ ಕುತೋ ವಿದ್ಯಾ ಅವಿದ್ಯಸ್ಯ ಕುತೋ ಧನಮ್ ।**
**ಅಧನಸ್ಯ ಕುತೋ ಮಿತ್ರಮ್ ಮಿತ್ರಸ್ಯ ಕುತಃ ಸುಖಮ್ ॥**

ಸೋಮಾರಿಗೆಲ್ಲಿಯದು ಸದ್ವಿದ್ಯೆ ಸುಜ್ಞಾನ ?
ವಿದ್ಯೆಯಿರದಿರಲೆಲ್ಲಿ ಸಂಪತ್ತು, ಧನಕನಕ ?
ಧನವಿಲ್ಲದವನಿಗೆಲ್ಲಿ ಜಗದಲ್ಲಿ ಸ್ನೇಹಿತರು
ಸಖರಿಲ್ಲದವನಿಗೆಲ್ಲಿ ಸುಖದ ಸವಿಯು ?

§§ ★ §§

**ವಿದೇಶೇಷು ಧನಂ ವಿದ್ಯಾ ವ್ಯಸನೇಷು ಧನಂ ಮತಿಃ ।**
**ಪರಲೋಕೇ ಧನಂ ಧರ್ಮಃ ಶೀಲಂ ಸರ್ವತ್ರ ವೈ ಧನಮ್ ॥**

ವಿದ್ಯೆಯೇ ಸಂಪದವು ಹೊರನಾಡಿನಲ್ಲಿ
ಬುದ್ಧಿಯೇ ಐಸಿರಿಯು ವ್ಯಸನದಲ್ಲಿ
ಧರ್ಮವೇ ಧನಕನಕ ಪರಲೋಕದಲ್ಲಿ
ಸನ್ನಡತೆ ಸಂಪತ್ತು ಎಲ್ಲ ಕಡೆಯಲ್ಲಿ

§§ ★ §§

—“ಕಾವ್ಯ ಸುಧಾಪ್ರಿಯ”

## ಅಮೃತ ಬಿಂದು

ಪ್ರಕೃತಿಯ ಪ್ರಸಾದದಿಂದ ಮನುಷ್ಯನು ಮನುಷ್ಯನಾಗಿ ಬಾಳಲು ಸಾಧ್ಯ. ಆದರ ಅನುಗ್ರಹದಿಂದಾಗಿ ಮನುಷ್ಯನ ಮೂಲಭೂತ ಅವಶ್ಯಕತೆಗಳಾದ ಅನ್ನ, ನೀರು, ಗಾಳಿ ಮುಂತಾದವುಗಳು ದೊರೆಯುತ್ತವೆ. ಈ ಕಾರಣಮಯಿಯಾದ ಪ್ರಕೃತಿ ಒಮ್ಮೊಮ್ಮೆ ವಿಕೋಪಗೊಳ್ಳುತ್ತದೆ. ಆಗ ಒಂದು ಕಡೆ ಅತಿವೃಷ್ಟಿಯಾದರೆ ಇನ್ನೊಂದು ಕಡೆ ಅನಾವೃಷ್ಟಿ. ಒಂದುಕಡೆ ಭೂಕಂಪ ಭೂಕುಸಿತಗಳು ಸಂಭವಿಸಿದರೆ ಇನ್ನೊಂದು ಕಡೆ ಜ್ವಾಲಾಮುಖಿ ಚಂಡಮಾರುತಗಳು ಉಂಟಾಗುತ್ತವೆ. ಇಂತಹ ಅನಾಹುತಗಳಿಂದ ರಕ್ಷಿಸಬೇಕಾಗಿದ್ದ ಪ್ರಕೃತಿ ಎಲ್ಲವನ್ನು ಎಲ್ಲರನ್ನು ಭಕ್ಷಿಸಿ ತೃಪ್ತಿಹೊಂದುತ್ತದೆ. “ಒಲೆ ಹತ್ತಿ ಉರಿದೊಡೆ ನಿಲಬಹುದಲ್ಲದೆ, ಧರೆ ಹತ್ತಿ ಉರಿದಡೆ ನಿಲಬಹುದೆ.” ಎಂಬ ಅಣ್ಣ ಬಸವಣ್ಣನವರ ಅನುಭವದ ನುಡಿ ಇಂದು ನಮ್ಮ ಅನುಭವಕ್ಕೆ ಬಂದಂತಾಗಿದೆ, ಮೊನ್ನೆ ತಾನೆ ನೆರೆ ರಾಜ್ಯಗಳಲ್ಲಿ ಸಂಭವಿಸಿದ ಚಂಡಮಾರುತದಿಂದಾಗಿ ಜನತೆಯಲ್ಲಿ ಆಸ್ತಿಕ ಭಾವನೆ ಅಳಿಸಿ, ನಾಸ್ತಿಕ ಭಾವನೆ ತಲೆದೋರಿ ಧರ್ಮಕ್ಕೆ ಹಾನಿಯುಂಟಾದಾಗ ಭಗವಂತನು ಈ ರಹದ ಅನಾಹುತಗಳನ್ನು ಉಂಟು ಮಾಡುತ್ತಾನಂತೆ. ಮನುಷ್ಯನು ಬುದ್ಧಿವಂತ, ಶಕ್ತಿವಂತನಾದರೂ ಅವನು ಪ್ರಕೃತಿಯ ಮುಂದೆ ಅಸಹಾಯ ಪ್ರೇಕ್ಷಕನಾಗಬೇಕಾಗುತ್ತದೆ. ಕಾರಣ ಅವನ ಶಕ್ತಿ ಸಾಮರ್ಥ್ಯಗಳು ಪರಿಮಿತ. ಆದ್ದರಿಂದ “ನಿತ್ಯಂ ಸಹಿತೋ ಮೃತ್ಯುಃ ಕರ್ತವ್ಯೋಧರ್ಮಸಂಗ್ರಹ” ! ಎನ್ನುವಂತೆ ಮನುಷ್ಯನ ಸಾವು ಅನಿವಾರ್ಯ, ಅಕಾಲ ಮೃತ್ಯುವಿಗೆ ತುತ್ತಾಗದೆ, ಧಾರ್ಮಿಕ ಭಾವನೆಯಿಂದ ಸಾರ್ಥಕ ಸಾವನ್ನಪ್ಪುವುದೇ ನಿಜವಾದ ಮನುಷ್ಯ ಧರ್ಮ.

—‘ದುಂಬಿ’

# ಮಕರ ಸಂಕ್ರಮಣ ಸೂರ್ಯೋಪಾಸನೆಯ ಪ್ರಮುಖ ಹಬ್ಬ

—ಚನ್ನಪ್ಪ ಎರೇಸೀಮೆ

ದೀಪಾವಳಿಯನಂತರ ಸಮಗ್ರ ಭಾರತೀಯರ ಮಹಾ ಪರ್ವವೆಂದರೆ ಮಕರಸಂಕ್ರಮಣದ ಹಬ್ಬ. ಮಕರಸಂಕ್ರಮಣ ಉತ್ತರಾಯಣ ಪುಣ್ಯಕಾಲವೆಂದು ಭಾರತೀಯರು ನದೀ ಸಂಗಮಸ್ಥಳ, ಸರೋವರ ತೀರ್ಥ ಕ್ಷೇತ್ರಾದಿಗಳಿಗೆ ಹೋಗಿ ಅಲ್ಲಿ ಸ್ನಾನಾದಿಗಳನ್ನಾಚರಿಸುತ್ತ ಅನೇಕ ಬಗೆಯಿಂದ ಮಾನಸಿಕ ನೆಮ್ಮದಿಯನ್ನೂ ಭಾವೈಕ್ಯವನ್ನೂ ಹೊಂದಿ ನೂತನವಾದ ಕೆಲವು ಆಹಾರಗಳ ಬದಲಾಹಿಸುವಿಕೆಯನ್ನೂ ಮಾಡುವ ಋತುಬದಲಾವಣೆಯ ಹಬ್ಬವನ್ನಾಚರಿಸುತ್ತಾರೆ. ಮುಖ್ಯವಾಗಿ ಈ ಹಬ್ಬ ಸೂರ್ಯಾರಾಧನೆಯಹಬ್ಬ. ಹರಿದುಬಂದ ವಿಸ್ತಾರಕಾಲ ಪ್ರಾಂತದಲ್ಲಿ ಅದು ವಿವಿಧ ರೂಪ ತಳೆಯುತ್ತ ಬಂದ್ದಿದೆ ದೇಶ, ಭಾಷೆ, ಬದುಕುಗಳಿಗೂ ವೈವಿಧ್ಯಕ್ಕೆ ಕಾರಣಗಳಾಗಿ ನಾನಾಬಗೆಯ ಆಚರಣೆ ತಲೆದೋರಿತು.

## ಸೂರ್ಯಾರಾಧನೆ

ಭಾರತದಲ್ಲಿ ಸೂರ್ಯಾರಾಧನೆ ಬಹು ಪ್ರಾಚೀನವಾದುದು. ಒಂದು ಕಾಲದಲ್ಲಿ ಇದು ಸಮಗ್ರಭಾರತದ ರಾಷ್ಟ್ರೀಯ ಹಬ್ಬವೇ ಆಗಿತ್ತು. ಭವಿಷ್ಯ ಪುರಾಣದಲ್ಲಿ 'ಸೂರ್ಯ ಏವ ತ್ರಿಲೋಕಸ್ಯ ಮೂಲಂ ಪರಮ ದೈವತಂ' (ಅ ೭೮–೪೩) ಎಂದೇ ಹೇಳಲಾಗಿದೆ. ವರಾಹಮಿಹಿರನು 'ತ್ರೈಲೋಕ್ಯ ದೇಪೋರವಿಃ' ಎಂದು ಸ್ತೋತ್ರ ಮಾಡಿದ್ದಾನೆ. ಇಂದು ಈ ಆರಾಧನೆ ಪೂರ್ಣ ಮಾಯವಾಗದಿದ್ದರೂ ಅದಕ್ಕೆ ಪ್ರಾಚೀನ ಕಾಲದಲ್ಲಿದ್ದ ಮಹತ್ವ ಕಾಣುತ್ತಿಲ್ಲವೆನ್ನಬಹುದು. ತಮಿಳು ನಾಡಿನಲ್ಲಿ 'ಪೊಂಗಲ್' ಎಂದೂ, ಇತರ ಕಡೆಗಳಲ್ಲಿ 'ಸಂಕ್ರಾಂತಿ' ಎಂದೂ ಕರೆದು ಆಚರಿಸಲ್ಪಡುವ ಈ ಹಬ್ಬ ಸೂರ್ಯಾರಾಧನೆ ದ್ಯೋತಕವೇ. ವೇದಗಳಲ್ಲಿ ಸೂರ್ಯನೂ ಒಬ್ಬ ದೇವತೆಯೇ. ಋಗ್ವೇದದಲ್ಲಿ ಹತ್ತು ಋಕ್ಕುಗಳಲ್ಲಿ ಸೂರ್ಯನ ಸ್ತೋತ್ರ ಮಾಡಲಾಗಿದೆ. 'ವಿಶ್ವಚಕ್ಷು' 'ನಭದ ಸ್ವರ್ಣಾಭರಣ' 'ಚರಾಚರ ಪ್ರಪಂಚದ ಆತ್ಮ' 'ಮಿತ್ರವರುಣರ ಕಣ್ಣು' ಇತ್ಯಾದಿಯಾಗಿ ಅಲ್ಲಿ ಸೂರ್ಯ ವರ್ಣಿತನಾಗಿದ್ದಾನೆ. ಅಲ್ಲಿ ಸೂರ್ಯನನ್ನು 'ಪ್ರತಿಮಾ' ವಿಧಾನದಿಂದಲೇ ವರ್ಣಿಸಿ ಅವನ ಸುತ್ತ ಒಂದು ಸಂಸಾರದ ಕಲ್ಪನೆಯೇ ಅಭಿವ್ಯಕ್ತವಾಗಿದೆ. ಸೂರ್ಯನಿಗೆ ಸಂಬಂಧಿಸಿದ ಅನೇಕ 'ಪ್ರತಿಮಾ' ಕಲ್ಪನೆಯ ಕಥೆಗಳು ಭವಿಷ್ಯ ಪುರಾಣ, ಅಗ್ನಿ ಪುರಾಣ, ಗರುಡ ಪುರಾಣ,ಸ್ಕಾಂದ ವರಾಹ ಪುರಾಣಗಳಲ್ಲಿ ಉಕ್ತವಾಗಿದೆ. ಭಾರತದಲ್ಲಿ ಸೂರ್ಯಾರಾಧನೆಯ ಆದ್ಯ ಪ್ರವರ್ತಕ ಕೃಷ್ಣ ಪುತ್ರನಾದ 'ಸಾಂಬ'ನೆಂದು ಭವಿಷ್ಯ ಪುರಾಣದಲ್ಲಿ ಉಕ್ತವಾಗಿದೆ. ಸಾಂಬ ಪುರಾಣವಂತೂ ಸೂರ್ಯನ ಬಗೆಗೆ ಬಹು ನಿಷ್ಠೆ ತೋರಿಸಿರುವ ಪುರಾಣ. ಪಾರಸಿ ಮತಸ್ಥಾಪಕನಾದ 'ಜರತುಷ್ಟ್ರ'ನ ಕಾಲದಿಂದಲೂ ಅವರಲ್ಲಿ ಸೂರ್ಯರಾಧನೆ ಇತ್ತು. ಈಗಿನ ಮುಲ್ತಾನ (ಮೂಲಸ್ಥಾನ) ದಲ್ಲಿರುವ ಸೂರ್ಯದೇವಾಲಯವನ್ನು ಈ ಪಾರಿಸಿಕರೇ ಕಟ್ಟಿಸಿದರು. ೬ ನೆಯ ಶತಮಾನದಲ್ಲಿ 'ಮಗಿ' ಎಂಬ ಹೆಸರಿನ ಪಾರಸಿಕರು ಭಾರತಕ್ಕೆ ಮಹಮ್ಮದೀಯರ ಹಾವಳಿ ನಿಮಿತ್ತ ಬಂದ ಮೇಲೆ ಇಲ್ಲಿ ಜನಪ್ರಿಯವಾಗಿದ್ದ ಸೂರ್ಯಾರಾಧನೆಯೊಡನೆ 'ಮಗಿ'ಯರ ಸೂರ್ಯಾರಾಧನೆಗೂ ಬಣ್ಣವೇರಿತು ಪ್ರತಿಮೆಗಳ ಕಲ್ಪನೆ ಈ ಕಾಲದಲ್ಲಿ ವೇದ ಪುರಾಣಾಗಳಲ್ಲಿ ಉಕ್ತವಾದ



ಕಥೆಯನ್ನನುಸರಿಸಿ ವಿಚಿತ್ರವಾಗಿಯೇ ಬೆಳೆಯಿತು. ಸೂರ್ಯನನ್ನೇ ಪರಬ್ರಹ್ಮನೆಂದು ಉಪಾಸಿಸುವ ಸೌರರೆಂಬ ಒಂದು ಪಂಗಡವೂ ಭಾರತದಲ್ಲಿ ಬೆಳೆದು ಬಂತು. ಮುಲ್ತಾನಿನಲ್ಲಿನ ಸೂರ್ಯದೇವಾಲವನ್ನು ಹ್ಯೂಯನ್‌ತ್ಸಾಂಗ್, ಆಲ್ಬೆರೋನಿ ಮುಂತಾದ ವಿದೇಶೀ ಪ್ರವಾಶಿಗಳು ಹೃದಯಂಗಮವಾಗಿ ವರ್ಣಿಸಿದ್ದಾರೆ. ಇಂದು ಆವರ ವರ್ಣನೆಯ ಮೂಲ ವಿಗ್ರಹಗಳು ಅಲ್ಲಿ ಇಲ್ಲ. ಅವೆಲ್ಲ. ಪರಕೀಯರಿಂದ ಧ್ವಂಸವಾಗಿ ಹೋದವು.

## ಸೂರ್ಯ ತೇಜಸನ್ನು ಕೊಡುವ ದೇವತೆ :

ಪ್ರಾಚೀನ ಭಾರತೀಯರು ಸೂರ್ಯನು ತೇಜಸ್ಸನ್ನು ಕೊಡುವ ದೇವತೆಯೆಂದೂ, ರೋಗ ಪರಿಹಾರಕನೆಂದೂ ಭಾವಿಸಿ ಆತನ ಉಪಾಸನೆ ಮಾಡಿದುದು ಕಂಡು ಬರುತ್ತದೆ. ರಾವಣ ಸಂಹಾರ ಕಾಲದಲ್ಲಿ ಶ್ರೀರಾಮನು ಆದಿತ್ಯ ಹೃದಯವನ್ನು ಜಪಿಸಿದನಂತರ ಅವನ ಇಷ್ಟಾರ್ಥ ಸಿದ್ಧಿಸಿದಂತೆ ರಾಮಾಯಣದಲ್ಲಿ ಉಕ್ತವಾಗಿದೆ. ಧರ್ಮರಾಯನು ಸೂರ್ಯನನ್ನು ಪ್ರಾರ್ಥಿಸಿ ಅಕ್ಷಯ ಪಾತ್ರೆಯನ್ನು ಪಡೆದು ಆದರಿಂದ ಸಾವಿರ ಜನ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡಿಸುತ್ತಿದ್ದನಂತೆ. ಗುಪ್ತರ ಕಾಲದಲ್ಲಿ ಸೂರ್ಯಾರಾಧನೆಗೆ ವಿಶೇಷ ಪ್ರಾಶಸ್ತ್ಯ ಸಿಕ್ಕಿದೆ. ಕುಮಾರಗುಪ್ತನ ಕಾಲದ ಒಂದು ಶಾಸನದಲ್ಲಿ ಆರ್ಕ ದೇವಾಲಯ ವೊಂದರ ನಿರ್ಮಾಣವು ಹೇಳಲ್ಪಟ್ಟಿದೆ. ಸ್ಕಾಂದಗುಪ್ತನ ಕಾಲದ ಒಂದು ತಾಮ್ರ ಶಾಸನಗಲ್ಲಿ ಮಾರ್ತಾಂಡನ ಆಲಯಕ್ಕೆ ನಂದಾದೀಪಕ್ಕೋಸ್ಕರ ದತ್ತಿ ಬಿಟ್ಟ ಹಾಗೆ ಉಕ್ತವಾಗಿದೆ. ಹರ್ಷ ಸಂತತಿಯ ಪೂರ್ವ ರಾಜರು ಆದಿತ್ಯನ ಪರಮ ಭಕ್ತರಾಗಿದ್ದರಂತೆ. ಮಯೂರನೆಂಬ ಕವಿ ಸೂರ್ಯನ ಅನುಗ್ರಹದಿಂದಲೇ ತನ್ನ ಕುಷ್ಟ ರೋಗವನ್ನು ನಿವಾರಿಸಿಕೊಂಡನಂತೆ. ಅವನು ಸೂರ್ಯ ಶತಕವೆಂಬ ಹೆಸರಿನ ಶತಕವು ಸೂರ್ಯನ ಸ್ತೋತ್ರಕ್ಕೆ ಮೀಸಲಾದ ಶತಕ, ಸೂರ್ಯ ಪ್ರಸಾದದಿಂದ ಏನಾಗುತ್ತದೆಂಬ ಬಗೆಗೆ ತನ್ನ ಶತಕದ ಕೊನೆಯ ಪದ್ಯದಲ್ಲಿ ಹೇಳಿದುದು ಹೀಗೆ :

"ಶ್ಲೋಕಾ ಲೋಕಸ್ಯ ಭೂತ್ಯೈ ಶತಮಿತಿ ರಚಿತಾಃ ಶ್ರೀ
ಮಯೂರೇಣ ಭಕ್ತ್ಯಾ ।
ಯುಕ್ತಶ್ಚೈತಾನ್ ಪಠೇತ್ಯಃ ಸಕೃದಪಿ ಪುರುಷಃ ಸರ್ವ
ಪಾಪೈರ್ವಿಮುಕ್ತಃ ।
ಆರೋಗ್ಯಂ ಸತ್ಕವಿತ್ವಂ ಮತಿಮತುಲಬಲಂ ಕಾಂತಿಮಾಯುಃ
ಪ್ರಕರ್ಷಂ॥
ವಿದ್ಯಾಮೈಶ್ವರ್ಯಮರ್ಥಂ ಸುಮಪಿಲಭತೇ ಸೋತ್ರ
ಸೂರ್ಯ ಪ್ರಸಾದಾತ್॥"

ಆರೋಗ್ಯ, ಒಳ್ಳೆಯ ಕವಿತಾಶಕ್ತಿ, ಬುದ್ಧಿ, ಅತುಲಭಲ, ಕಾಂತಿ, ಆಯುಷ್ಯದ ಅಭಿವೃದ್ಧಿ, ವಿದ್ಯೆ, ಐಶ್ವರ್ಯ, ಪುತ್ರಸಂತಾನ — ಏನೆಲ್ಲಲಭ್ಯವಾಗುವುದಂತೆ ಸೂರ್ಯ ಪ್ರಸಾದದಿಂದ. ಋಗ್ವೇದದಲ್ಲಿ 'ರೋಗಘ್ನ ಉಪನಿಷತ್' ಎಂದು ಕರೆಯಿಸಿಕೊಳ್ಳಲ್ಪಡುವ ಕೆಲವು ಋಕ್ಕುಗಳಲ್ಲಿ ಸರ್ವವ್ಯಾಧಿ ನಿವಾರಣೆಗೆ, ಭೂತಬಾಧೆ ಗ್ರಹಶಂಕೆಗಳ ನಿವಾರಣೆಯ ಬಗೆಗೆ ಹೇಳಿರುವ ಉಕ್ತಿ ಇಂದಿನ ವೈದ್ಯರೂಕೂಡ ಸೂರ್ಯಸ್ನಾನಾದಿಅನೇಕವಿಧಾನಗಳಿಂದ ಆರೋಗ್ಯದ ಮೇಲಾಗುವ ಉತ್ತಮ ಪರಿಣಾಮಗಳನ್ನು ಒಪ್ಪಿ ಆಚರಣೆಗೆ ತಂದಿದ್ದಾರೆ ಒಟ್ಟಿನಲ್ಲಿ ಸೂರ್ಯ ಲೋಕಜೀವನಕ್ಕೆ ಅತ್ಯಂತ ಉಪಯುಕ್ತವಸ್ತು. ಅಂತೆಯೇ ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ "ಲೋಕದ ಚೇಷ್ಟೆಗೆ ರವಿಬೀಜ" ಎಂದಿದ್ದಾಳೆ. ಇಲ್ಲಿ ಚೇಷ್ಟೆ, ಎಂದರೆ ಕ್ರಿಯಾರೂಪ ವ್ಯವಹಾರವೆಂದು ಅರ್ಥ. ಇಂಥ ಜೀವನಾದಾರನಸ್ತುವಾದ ಸೂರ್ಯನಬಗೆಗೆ ಪ್ರಾಚೀನ ಮಾನವನಿಂದಲೂ ಭಕ್ತಿ, ಬೆಳೆದು ಬಂದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಈಕಾರಣದಿಂಗದಲೇ ಸೂರ್ಯನಿಗೆ ಲೆಕ್ಕವೇ ಇಲ್ಲ.

ನಮ್ಮ ಪುರಾಣೇತಿಹಾಸ ಕವಿಗಳು ಸೂರ್ಯನನ್ನು ಆದಿತ್ಯ, ಭಾನು, ರವಿ, ದಿನಮಣಿ, ಅಹಸ್ಕರ, ಭಾಸ್ಕರ, ಮಾರ್ತಾಂಡ, ಇನ, ತರಣಿ, ದ್ಯುಮಣಿ, ಮಿತ್ರ, ಖಗ, ಭಗ, ಹರಿದಶ್ವ, ಅರ್ಕ, ಅಂಶುಮಾಲಿ, ಪ್ರಭಾಕರ, ದಿವಾಕರ, ದಿನಕರ. ವಿಕರ್ತನ, ಪ್ರದ್ಯೋತನ, ಪತಂಗ, ಹರಿ, ವಿವಸ್ವಾನ್, ಚಿತ್ರಭಾನು, ಭಾಸ್ವಾನ್, ಅಹಸ್ಪತಿ, ಕರ್ಮಸಾಕ್ಷಿ, ಜಗದ್ಪೃಕ್, ಸೂರ, ಅರವಿಂದ, ಬಂದು, ಬೃದ್ನ, ಹಂಸ, ಅಂಶುಮಾನ್, ತಿಗಾಂಶು, ಮಿಹಿರ, ವಿರೋಚನ. ದ್ವಾದತ್ಮಾ, ಸವಿತಾರ ಇನ್ನೂ ಏನೇನೆಂದೋ ಕರೆದಿವೆ. ಇವನಿಗಿರುವಷ್ಟು ಹೆಸರು ಯಾರಿಗೂ ಇಲ್ಲ.

ಭಾರತದಲ್ಲಿ ಸೂರ್ಯನಿಗಾಗಿಯೇ ಕಟ್ಟಿದದೇವಾಲಯಗಳು ವಿರಳ. ಆದರೆ ಬೇರೆ ಬೇರೆ ಶಿವ-ವಿಷು ದೇವಾ

ಲಯಗಳಲ್ಲಿ ಸೂರ್ಯ ವಿಗ್ರಹಗಳು ಗೌಣವಾಗಿ ಇಲ್ಲದಿಲ್ಲ. ಸೂರ್ಯಶಕ್ತಿಯು ಶಿವ-ವಿಷ್ಣು ಇವರಿಂದ ಬಂದುದೆಂದೇ ಹಾಗೆ ಮಾಡಿದ್ದಾರೆ. ಸೂರ್ಯನಿಗಾಗಿಯೇ ಕಟ್ಟಿದ ದೇವಾಲಯಗಳೆಂದರೆ ಕಾಶ್ಮೀರದಲ್ಲಿ ಲಲಿತಾದಿತ್ಯನು ಕಟ್ಟಿಸಿದ ಮಾರ್ತಾಂಡದೇವಾಲಯ ಗುಜರಾತಿನಲ್ಲಿ ಪುಷ್ಪವತಿನದಿಯದಂಡೆಯಲ್ಲಿ ಕ್ರಿ. ಶ ಸುಮಾರು ೧೧ನೆಯ ಶತಮಾನದಲ್ಲಿ ನಿರ್ಮಾಣವಾದ 'ಮೋಥೇರಾ, ಎಂಬ ಈರಿಗಿನ ಹಳ್ಳಿಯಲ್ಲಿರುವ ಸೂರ್ಯದೇವಾಲಯ, ಉತ್ಕಲ ದೇಶದಲ್ಲಿ ಪುರಿಜಿಲ್ಲೆಯಲ್ಲಿರುವ ಕೋಣಾರ್ಕ ಅಥವಾ ಕೋಣಾದಿತ್ಯ ದೇವಾಲಯ, ತಂಜಾವೂರು ಜಿಲ್ಲೆಯ ಸೂರ್ಯನಾರ್‌ಕೋವಿಲ್' ಎಂಬ ಹೆಸರಿನ ಕುಲೋತ್ತುಂಗ ಚೋಳ ( ಕ್ರಿ. ಶ. ೧೦೬೦-೧೧೧೮ ) ನಿಂದಕಟ್ಟಿಸಲ್ಪಟ್ಟ ಸೂರ್ಯ ದೇವಾಲಯಗಳು ಮುಖ್ಯವಾದವು. ಈ ದೇವಾಲಯಗಳಲ್ಲೆಲ್ಲ ವಿಗ್ರಹಗಳು ಒಂದೊಂದು ವಿಧವಾಗಿವೆ. ಈಗಪಾಕಿಸ್ತಾನದಲ್ಲಿರುವ ಮುಲ್ತಾನಿನ ದೇವಾಲಯವನ್ನು ಈ ಪಟ್ಟಿಯಲ್ಲಿ ಸೇರಿಸಬಹುದು. ಆವರೆ ಮುಲ್ತಾನ (ಮೂಲಸ್ಥಾನ), ಕಾಶ್ಮೀರ, ಮೋಥೇರಾ, ಕೋಣಾರ್ಕಗಳಲ್ಲಿ ಮೂಲವಿಗ್ರಹಗಳು ಮೂರ್ತಿಭಂಜಕರಾದ ಪರಕೀಯರು ದಾಳಿಯಿಂದ ನಾಶವಾಗಿವೆ ಅವುಗಳ ಸ್ಥಳದಲ್ಲಿ ಇತ್ತೀಚೆಗೆ ವಿಗ್ರಹಗಳು ಪ್ರತಿಷ್ಠೆಗೊಂಡಿವೆ. ಈಸೂರ್ಯ ಸಂಬಂಧವಾದ ಚರಿತ್ರೆಏನೇ ಇರಲಿ ಮಕರಸಂಕ್ರಮಣವು ಸೂರ್ಯನ ಈ ಮಹಾಶಕ್ತಿಯ ಬಗೆಗೆ ಮನುಷ್ಯ ಹಿಂದಿನಿಂದಲೂ ಹೊಂದಿದ್ದ ಭಕ್ತಿ ಭಾವವನ್ನು ಪ್ರಕಟಗೊಳಿಸಿ ತನ್ನಸೌಖ್ಯವನ್ನು ಅಪೇಕ್ಷಿಸುವುದರ ದ್ಯೋತಕವಾಗಿ ಸಮಾಜದಲ್ಲಿ ಹಿಂದಿನಿಂದಲೂ ಆಚರಣೆಗೆ ಬಂದ ಒಂದು ಸಾಮಾಜಿಕ ಪರ್ವಾಚರಣೆ ಎಂದು ತಿಳಿದರೆ ಸಾಕು.

**ಋತು ಬದಲಾವಣೆ :**

ಸೂರ್ಯನು ಉತ್ತರ ಕರ್ನಾಟಕ ಸಂಕ್ರಾಂತಿವೃತ್ತದ ಕಡೆಗೆ ದಕ್ಷಿಣದ ಮಕರಸಂಕ್ರಾಂತಿ ವೃತ್ತದಿಂದ ನಿರ್ಗಮಿಸುವ ಈದಿನವನ್ನು ಉತ್ತರಾಯಣಪುಣ್ಯಕಾಲವೆಂದೇ ಭಾರತೀಯರ ನಂಬಿಕೆ. ಮಹಾಭಾರತದಲ್ಲಿ ಭೀಷ್ಮರು ಈಉತ್ತರಾಯಣದಪುಣ್ಯಕಾಲದಲ್ಲೇ ದೇಹ ತ್ಯಜಿಸಿದರೆಂಬುದ ಜ್ಞಾಪಿಸಿಕೊಳ್ಳಬೇಕು. ಮಕರಸಂಕ್ರಮಣಬರುತ್ತಾ ಜನರ ಬಾಳಿಗೊಂದು ಬಣ್ಣವೇರುತ್ತದೆ. ಮಾಗಿಯ ಈಕಾಲಕ್ಕೆ ಪೈರೆಲ್ಲ ಮಾಗಿ ಒಕ್ಕಲು ಪ್ರಾರಂಭವಾಗಿ ರೈತನಜೀವನದಲ್ಲೊಂದು ಅಪೂರ್ವ ಉತ್ಸಾಹ ಕಳೆದೋರುತ್ತದೆ ಭಾವುಕರಾದ ಶಾಸ್ತ್ರೀಯ ರೈತವರ್ಗ ಮಕರಸಂಕ್ರಮಣಾಂತರವೇ ಧಾನ್ಯ ಒಕ್ಕಲು ಪ್ರಾರಂಭಿಸುತ್ತಾರೆ. ಕಬ್ಬನ್ನುಮುರಿಯುವುದೂ ಈಗಲೇ. ಈಹೊತ್ತಿಗೆಕಬ್ಬು ತೆನೆಹಾಯ್ದು ಬಲಿತು ಆಲೇಮನೆಗೆ ಬರುತ್ತದೆ. ಕಬ್ಬು ಕಬ್ಬಿನರಸ ಹೊಸಬೆಲ್ಲ ಎಳ್ಳು ಮಾಗಿದ ಎಲಚಿ (ಬೋರೆ) ಹಣ್ಣುಗಳು ಈಹಬ್ಬದ ಮುಖ್ಯ ತಿನಿಸುಗಳು. ಎಳ್ಳುಬೆಲ್ಲ ಕಬ್ಬಿನಹಾಲುಗಳು ಈಋತುವಿನಲ್ಲಿ ದೇಹ ಪೋಷಣೆಗೆ ಬೇಕಾಗುವ ಅತ್ಯಾವಶ್ಯಕ ವಸ್ತುಗಳು ಗೌರೀಹಬ್ಬ, ಮಹಾನವಮಿ, ದೀಪಾವಳಿ, ಮಕರಸಂಕ್ರಮಣ ಇವುಗಳೆಲ್ಲ ಜನಜೀವನ ಪರಸ್ಪರ ಬೆಸುಗೆಗೊಳ್ಳಲು ಪ್ರೇಮ ವಿಶ್ವಾಶಗಳಿಂದ ಕೂಡಿ ಭಾವೈಕ್ಯ ಸಾಧಿಸಲು ಪ್ರಮುಖ ಸಾಮಾಜಿಕ ಪರ್ವಗಳೇ ಆಗಿವೆ. ಗೌರೀಹಬ್ಬದಲ್ಲಿ ಸ್ತ್ರೀಯರು ಪರಸ್ಪರ "ಬಾಗಿನ" ಕೊಡುವುದರ ಮೂಲಕ ಕಲೆತರೆ ಮಕರಸಂಕ್ರಮಣ ಎಳ್ಳು ಬೆಲ್ಲ ಬೀರುವ ಪರಸ್ಪರ ಸಂಬಂಧಕಲ್ಪನೆಯ ಉತ್ತಮ ಅವಕಾಶವನ್ನೊದಗಿಸುತ್ತದೆ. ಕೆಲವರು ದೂರದೂರದ ನದಿಗಳು, ಸಂಗಮ ಸ್ಥಳಗಳು, ಪರ್ವತಪ್ರಾಂತಗಳಿಗೆ ಹೋಗಿ ಆ ಉತ್ತರಾಯಣ ಪುಣ್ಯಕಾಲದಲ್ಲಿ ಎಳ್ಳನ್ನೂ, ಎಳ್ಳೆಣ್ಣೆಯನ್ನೂ ಮೈಗೆ ತಿಕ್ಕಿಕೊಂಡು ಸ್ನಾನಮಾಡಿ ಪುನಿತರಾದೆವೆಂದು ಭಾವಿಸುವುದರ ಜೊತೆಗೆ ಆಕಾಲದಲ್ಲಿ ಕಾಣುವ ಭವ್ಯ ದಿವ್ಯ ಪ್ರಕೃತಿಯ ಸೊಬಗಿಗೆ ಮೈಮರೆತು ಈಶ್ವರನ ಅನಂತ ಕಲ್ಯಾಣ ಗುಣ ಸೃಷ್ಟಿವೈಚಿತ್ರ್ಯವನ್ನು ಕಂಡು ಜೀವನದ ಅನೇಕ ಕಲ್ಮಷಗಳಿಂದದೂರವಾಗಿ ನೂತನೋತ್ಸಾಹ ಭರಿತರಾಗುತ್ತಾರೆ.

**ಎಳ್ಳು ಉತ್ತಮ ಧಾನ್ಯ ವಿಶೇಷ :**

ಉತ್ತರಾಯಣ ಪುಣ್ಯಕಾಲದ ಸೂಳ್ನುಡಿಯೆಂದರೆ 'ಎಳ್ಳುಬೆಲ್ಲತಿಂದು ಒಳ್ಳೊಳ್ಳೆ ಮಾತಾಡು' ಎಂಬುದು ಆ ಧಾನ್ಯ ಸಕ್ಕರೆಯ ಅಚ್ಚಿನಂತಹ ನಾಗರಿಕ ಯೋಗ್ಯ ವಿವಿಧರೂಪ, ಲಾವಣ್ಯ, ವಿನ್ಯಾಸ ಪಡೆದರೂ 'ಎಳ್ಳುಬೆಲ್ಲ' ಎಂಬ ಹೆಸರನ್ನು ಸೋಲಿಸಲಾಗಲಿಲ್ಲ. ಯಾರು ಎಳ್ಳು ಸಕ್ಕರೆ ಎನ್ನುವುದೇಇಲ್ಲ. ಬಹುಶಃ ಭಾರತದಲ್ಲಿ, ಕರ್ನಾಟಕದಲ್ಲಿ ಎಳ್ಳಿನ ಬೃಹತ್ತು ಮಹತ್ತುಗಳನ್ನು ಮೀರಿಸುವ ಧಾನ್ಯ ಇನ್ನೊಂದು ಹುಟ್ಟಲಿಲ್ಲವೆಂದೇ ತೋರುತ್ತದೆ. ಸಾಮಾಜಿಕ, ಧಾರ್ಮಿಕ, ಆರೋಗ್ಯ ಕ್ಷೇತ್ರಗಳಲ್ಲಿ ಎಳ್ಳಿನ ಮಹತ್ವ ಹಾಸುಹೊಕ್ಕಾಗಿದೆ. ಕೆಲವು ದೇವರ ನೈವೇದ್ಯಕ್ಕೆ ಎಳ್ಳಿನ ಚಿಗಳಿ ಇಲ್ಲದಿದ್ದರೆ ಯಾವ ವರವನ್ನೂ ಕೋರವು. ಕನ್ನಡ ನಾಡಿನ ಪ್ರಸಿದ್ಧ ಕರಚಿಕಾಯಿಗೆ ಎಳ್ಳು ಬೇಕೇಬೇಕು. ಚಕ್ಕುಲಿ,ಮುಂಡಿಗೆ, ಸಂಬಾರ ಪುಡಿಗೆ ಎಳ್ಳು ಬೇಕೇಬೇಕು. ಸಜ್ಜೆಯರೊಟ್ಟಿಗೆ ಎಳ್ಳುಹಚ್ಚಿ ಸುಟ್ಟು ಎಳ್ಳು ಪುಡಿಹಾಕಿ ಮಾಡಿದ ಬದನೇಕಾಯಿ ಇಡಿಗಾಯಿ, ಎಳ್ಳು ಹುರಿದು ಮಾಡಿದ ಹಸಿಮೆಣಸಿನ ಕಾಯಿಚಟ್ನಿ, ಕೆನೆಮೊಸರು ಜಿಹ್ವಾ ಚಾಪಲ್ಯವನ್ನು ಕೆರಳಿಸುವ ರಸದೌತಣಗಳೇ.

ಈಗ 'ಎಣ್ಣೆ' ಎಂದು ಎಲ್ಲ ಎಣ್ಣೆಗಳಿಗೂ ಬಳಸುತ್ತೇವೆ ಕೊನೆಗೆ ಕಲ್ಲೆಣ್ಣೆಯಾದ ಸೀಮೆ ಎಣ್ಣೆಗೂ, ಎಣ್ಣೆ ಎಂಬುದೇ ಹೆಸರು. ಪೆಟ್ರೋಲ್ ಕೂಡ 'ಪೆಟ್ರೋಲ್‌ಎಣ್ಣೆಯೇ'ಆಗಿದೆ. ನಿಜವಾಗಿ ನೋಡಿದರೆ 'ಎಣ್ಣೆ' ಶಬ್ದ ಹುಟ್ಟಿದುದೇ ಎಳ್ಳಿನಿಂದ 'ಎಳ್+ನೆಯ್' ಅಂದರೆ ಎಳ್ಳಿನ ರಸವೇ 'ಎಣ್ಣೆ' ಎಂಬ ನಾಮಧರಿಸಿನಿಂತಿದೆ. ಎಳ್‌ನೆಯ್-ಎಳ್‌ನೆ-ಎಳ್‌ಣೆ-ಎಣ್ಣೆ. ಹೀಗೆ ಬೆಳೆದುಬಂದಿದೆ ಅದರ ಚರಿತ್ರೆ. ಈ ಎಳ್‌ನೆಯ್ಯ ಸ್ಥಾನವನ್ನು ಕಡಲೇಕಾಯಿರಸವಾದ ಕಡಲೇಕಾಯಿ ಎಣ್ಣೆ, ಹರಳೆಣ್ಣೆ, ಕೊಬ್ಬರಿಎಣ್ಣೆ, ಹೊಂಗೆಎಣ್ಣೆ ಇವುವಹಿಸಿ ಅವುಗಳ ಅವಾಂತರದಲ್ಲಿ ಎಳ್‌ನೆಯ್ ಮೂಲೆಸೇರಿಹೋಗಿದೆ.

ಭಾರತೀಯ ಪ್ರಾಚೀನ ಸಾಹಿತ್ಯ ಭಂಡಾರದಲ್ಲಿ ಎಳ್ಳಿನ ಮಹತ್ವವು ಉಲ್ಲೇಖಿಸಲ್ಪಟ್ಟಿದೆ ಸಂಸ್ಕೃತದಲ್ಲಿ 'ತಿಲ' ಎಂದು ಹೆಸರು. ಇದರ ರಸವೇ 'ತೈಲ' ಆಗಿದೆ. ಈ ಶಬ್ದವೇ ಎಲ್ಲ ಧಾನ್ಯಗಳಿಗೂ ಭೃಂಗಾಮಲಕ ತೈಲ, ಕಡಲೇಕಾಯಿ ತೈಲ.......ಇತ್ಯಾದಿ ಎರವಲು ಹೋಗಿದೆ. ಸ್ವಲ್ಪ ವ್ಯತ್ಯಾಸಗೊಂಡು ಹಿಂದೀ ಉರ್ದು ಭಾಷೆಗಳಲ್ಲಿ ತೇಲ್ ಆಗಿದೆ.

ಸಾಹಿತ್ಯ ಲೋಕದಲ್ಲಿ 'ಎಳ್ಳು, 'ಎಳ್, ಶಬ್ದಗಳು ಗಣ್ಯಸ್ಥಾನ ಪಡೆದಿವೆ 'ತಿಲದ ಮರೆಯ ತೈಲದಂತೆ .......' ಎಂದಿದ್ದಾಳೆ ಅಕ್ಕಮಾದೇವಿ. 'ಎಳ್ಳಿಲ್ಲದಗಾಣವ ನಾಡಿದ ಎತ್ತಿನಂತೆ.......' ಎಂದಿದ್ದಾರೆ ಬಸವಣ್ಣ. 'ಎಳ್ಳಿಂಗೆ ಪರಿಮಳ ವೇಧಿಸಿದಲ್ಲದೆ ಎಣ್ಣೆಗೆ ಪರಿಮಳ ವೇಧಿಸದು.......' ಎಂದಿದ್ದಾರೆ ಪ್ರಭುದೇವರು ಇಂಥ ನೂರಾರು, ಸಾವಿರಾರು ಮಾತುಗಳನ್ನು ಸಾಹಿತಿಗಳು ದಾರ್ಶನಿಕರು ಎಳ್ಳಿನ ಬಗೆಗೆ ಹೇಳಿದ್ದಾರೆ. ಯಾರೂ ರಾಗಿ ಅಕ್ಕಿ ಗೋಧಿಯ ಬಗೆಗೆ ಹೀಗೆ ಮಹತ್ವವಿತ್ತು ಆಡಿದಂತಿಲ್ಲ. ಗಾದೆಗಳಲ್ಲಿ ಪಡಿವಾತುಗಳಲ್ಲಿ ಇದರ ಹೆಸರೆತ್ತಿದುದು ಅಸಂಖ್ಯಾತ. ಎಳ್ಳು ಒಣಗಿದರೆ ಎಣ್ಣೆ ಬಂತು ನೀ ಒಣಗಿದರೇನುಬಂತು ? 'ಎಳ್ಳು ಕಿತ್ತು ಹುಳ್ಳಿ ಹಾಕಿದಂತೆ' 'ಎಣ್ಣೆ ಬೆಣ್ಣೆ ಇಲ್ಲದವನಂತೆ'....... ಇತ್ಯಾದಿ ಇತ್ಯಾದಿ ನೂರಾರು ಮಾತು ಎಳ್ಳಿನ ಬಗೆಗೆ ಸಿಗುತ್ತವೆ.

ಶಿವನು'ಎಳ್ಳು ಕಾಳು ಮುಳ್ಳು ಮೊನೆಯಲ್ಲಿ ಅಡಗಿದ್ದಾನೆ' ಎನ್ನುತ್ತಾರೆ. 'ಎಳ್ಳಷ್ಟೂ ಇಲ್ಲ' ಎಂದು ಹೇಳುವ ಮಾತು ಸರ್ವಗ್ರಾಹ್ಯ. ಇದನ್ನೇ ಸಂಸ್ಕೃತೀಕರಣಮಾಡಿ ತಿಲಪ್ರಾಯ ಇಲ್ಲ. ತಿಲವರ್, ತಿಲೋಪಮ ತಿಲಸದೃಶ-ಗಸಗಸೆ ಎಳ್ಳಿಗಿಂತ ಚಿಕ್ಕದಾದರೂ, ರಾಗಿ ಎಳ್ಳಿನಷ್ಟೇ ಇರುವ ಉಪಯುಕ್ತ ವಸ್ತುವಾದರೂ ಅದರ ಹೆಸರನ್ನೇ ಎತ್ತುವುದಿಲ್ಲ.

ತಿಲದ ಆಕಾರದಲ್ಲಿ ಹಣೆಯ ಮೇಲೆ ಧರಿಸುವ ಸಾದು ಬೊಟ್ಟಿಗೆ 'ತಿಲಕ' ಎನ್ನುವರು. ಇದರ ಸಂಕೇತವಾಗಿಯೋ ಏನೊ ತಿಲಕ ಪ್ರಾಯ, ತಿಲಕಸದೃಶ, ಮಂತ್ರಿ ತಿಲಕ, ಯತಿ ತಿಲಕ, ಗುರು ತಿಲಕ....ಎಂದು ಶ್ರೇಷ್ಠತೆಯ ದೃಷ್ಟಿಯಿಂದ ಕರೆಯಲಾಗುತ್ತದೆ. ತಿಲ-ತೈಲ- ತಿಲಕ- ತೈಲಿಗ- ತೈಲೀನ -ತೈಲಿಕ(ಎಳ್ಳುಹಿಂಡಿ) ಇತ್ಯಾದಿ ತಿಲದ ವಿವಿಧ ರೂಪಗಳು ಭಾಷೆಯಲ್ಲಿ ಬೆಳೆದು ಬರಬೇಕಾದರೆ ಜನಜೀವನದೊಡನೆ ಎಳ್ಳಿಗಿರುವ ಗಾಢ ಸಂಬಂಧವೇ ಕಾರಣ. ತೆನ್ನಾಲಿರಾಮಕೃಷ್ಣ ತನ್ನನ್ನು ಸೋಲಿಸ ಬಂದ ಪ್ರತಿವಾದಿ ಭಯಂಕರನಿಗೆ ತನ್ನ ಬಗಲೊಳಗಿನ ಗಂಟನ್ನು 'ತಿಲಕಾಷ್ಠ ಮಹಿಷಬಂಧನ' ಎಂಬ ಗ್ರಂಥವೆಂದನಂತೆ. ಈ ಹೆಸರು ಕೇಳುತ್ತಲೇ ಪ್ರತಿವಾದಿ ಬೆಪ್ಪಾದನಂತೆ.

ಲಾಕ್ಷಣಿಕರು ಮಿಶ್ರಾಲಂಕಾರ ಹೇಳುವಲ್ಲಿ ತಿಲತಂಡುಲವತ್ 'ಸಂಸೃಷ್ಟಿಃ' ಎಂದರು. ಅಕ್ಕಿಯಷ್ಟೆ ಪ್ರಮಾಣದ ಬೇರೆ ಕರಿಯ ಧಾನ್ಯಗಳಿದ್ದರೂ ಅವುಗಳ ಹೆಸರೆತ್ತಲಿಲ್ಲ. ಷೋಡಶದಾನಗಳಲ್ಲಿ ಗೋಭೂಮಿ ತಿಲ ....ಎಂದು ಗೋಭೂಮಿಗಳಾದಮೇಲೆ ಬರುವ ಧಾನ್ಯವಿಶೇಷಗಳಲ್ಲಿ ಎಳ್ಳಿಗೆ ಪ್ರಥಮ ಪ್ರಾಶಸ್ತ್ಯ ಕೊಟ್ಟರು. ದಶಧಾನ್ಯಗಳಲ್ಲಿ ನವವಿಧ ಧಾನ್ಯಗಳಲ್ಲಿ ಎಳ್ಳೇ ಮೊದಲನೆಯದು; ಅದೇಪ್ರಥಮ ಪ್ರಾಶಸ್ತ್ಯದಧಾನ್ಯ ಹೀಗೆ ಎಳ್ಳು

ಬರುತ್ತಿದೆ. **'ನಪ್ರಾಕ್‌ತ್ವತ್ತಃ ಪುರಾವಿದ್ಯಾಬ್ರಾಹ್ಮಣಾನ್‌ಗಚ್ಛತಿ'** ಎಂದರೆ ನಿನಗಿಂತಲೂ ಹಿಂದೆ ಬ್ರಹ್ಮವಿದ್ಯೆಯು ಬ್ರಾಹ್ಮಣರಿಗೆ ಲಭಿಸಿರಲಿಲ್ಲ. ಎಂದು ಕ್ಷತ್ರಿಯರಾಜ ಜೈವಲಿಯು ಬ್ರಾಹ್ಮಣಶಿಷ್ಯ ಆರುಣಿಗೆ ಹೇಳಿದುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಆದುದರಿಂದ ಉಪನಿಷತ್‌ವಿದ್ಯೆಯು ಕ್ಷತ್ರಿಯರಿಂದಲೇ ಪ್ರಾರಂಭಿಸಲ್ಪಟ್ಟಂತೆ ಕಾಣುತ್ತದೆ. ತಂದೆ ಯಾರೆಂದು ಹೇಳಲಾಗದಿರುವ ದಾಸೀಪುತ್ರ ಸತ್ಯಕಾಮಜಾಬಾಲಿಗೂ, ಶೂದ್ರರಾಜ ಜಾನಶ್ರುತಿಗೂ, ಗಾರ್ಗಿಮೊದಲಾದ ಸ್ತ್ರೀಯರಿಗೂ ಬ್ರಹ್ಮವಿದ್ಯಾಧಿಕಾರವಿದ್ದುದು ಉಪನಿಷತ್ತುಗಳಲ್ಲಿ ಕಂಡುಬರುವದರಿಂದ ಸ್ತ್ರೀಪುರುಷತಾರತಮ್ಯ, ಜಾತಿಜಾತಿಗಳಲ್ಲಿ ತಾರತಮ್ಯ ಮಾಡದಿರವುದೇ ಮೊಲಾದ ವಿಷಯಗಳಲ್ಲಿ ವಚನಸಾಹಿತ್ಯಕ್ಕೆ ಉಪನಿಷತ್ ಸಾಹಿತ್ಯವೇ ಹಿನ್ನೆಲೆ ಎನ್ನಬಹುದು. ಆದುದರಿಂದ ವಚನಸಾಹಿತ್ಯವನ್ನು 'ವಚನೋಪನಿಷತ್' ಎಂದು ವಿದ್ವಾಂಸರು ಕರೆದಿರುವದರಲ್ಲಿ ಸಾರ್ಥಕತೆಯಿದೆ.

"ಉಪನಿಷತ್ತುಗಳಲ್ಲಿಲ್ಲದ ವಿಷಯವೆಲ್ಲ ವಚನಗಳಲ್ಲಿ ಸಿಗುತ್ತದೆ; ವಚಗಳಲ್ಲಿರುವ ವಿಷಯವೆಲ್ಲ ಉಪನಿಷತ್ತುಗಳಲ್ಲಿ ಸಿಗುವುದು ಸಾಧ್ಯವಿಲ್ಲ" ಎಂದು ದಿವಾಕರರು ವೀರಶೈವ ತತ್ತ್ವ ಪ್ರಕಾಶದಲ್ಲಿ ಹೇಳಿರುವುದು ಅತಿಶಯೋಕ್ತಿಯಲ್ಲ. ಏಕೆಂದರೆ ಉಪನಿಷತ್ತೊಂದೇ ವಚನಸಾಹಿತ್ಯಕ್ಕೆ ಆಗರವಲ್ಲ. ಉಪನಿಷತ್ತುಗಳ ಜ್ಞಾನದೊಂದಿಗೆ ಆಗಮಗಳಲ್ಲಿನ ಭಕ್ತಿಯನ್ನು, ಭಗವದ್ಗೀತೆಯ ನಿಷ್ಕಾಮಕರ್ಮವನ್ನೂ, ಯೋಗಿಗಳ ಯೋಗಮಾರ್ಗವನ್ನೂ ಸಮನ್ವಯಗೊಳಿಸಿ ಬಸವೇಶ್ವರನ ಪ್ರೇರಣೆಯಿಂದ ಪ್ರಭುದೇವರ ನೇತೃತ್ವದಲ್ಲಿ ನಡೆದ ಅನುಭವಮಂಟಪದಲ್ಲಿನ ವಿಚಾರವಿನಿಮಯಕ್ಕನುಸಾರವಾಗಿ ಷಟ್‌ಸ್ಥಲಸಿದ್ಧಾಂತವನ್ನು ರೂಪಿಸಿದುದು ಚನ್ನಬಸವೇಶನ ವಚನಸಾಹಿತ್ಯದಲ್ಲಿ ಕಂಡುಬರುವುದು. ಮಹತ್ವದ ವಿಷಯವಾಗಿದೆ.

ವಚನ ವಾಙ್ಮಯವು ವೈದಿಕ ವಾಙ್ಮಯಕ್ಕೆ ಪೂರಕವಾಗಿದೆಯೆನ್ನಬಹುದು. ಋಗ್ವೇದದಲ್ಲೆಲ್ಲ ಅತಿ ಕ್ಲಿಷ್ಟವಾದುದು ನಾಸದೀಯ ಸೂಕ್ತ; ಅದನ್ನು ನಾವು ವಚನವಾಙ್ಮಯದಿಂದಲೇ ವಿವರಿಸುವುದನ್ನು ಕುರಿತು ಡಾ. ಎಂ. ವಿ. ಕೃಷ್ಣರಾಯರು –"The vachanas themselves and their metaphyque become meaningful in the light of their counterpart in nasadeeyasukta" ಇದರಲ್ಲಿ ವಚನಗಳನ್ನುನಾಷದೀಯ ಸೂಕ್ತದ Counterpart ಎಂದರೆ ಪ್ರತಿರೂಪ ಎಂದಿರುವುದು ಗಮನಾರ್ಹ. ಈಶಾವಾಸ್ಯದಲ್ಲಿನ ಒಂದು ಕ್ಲಿಷ್ಟಮಂತ್ರದ ಅರ್ಥವನ್ನು ಬಿಡಿಸಲು ಚೆನ್ನಬಸವೇಶ್ವರನ ವಚನವು ಸಹಾಕವಾಗಿರುವುದು ಹಾಗೆಯೇ ಗಮನಾರ್ಹವಾದುದಾಗಿದೆ." **ಅಂಧಂತ ಮಃ ಪ್ರವಿಶಂತಿಯೇಽವಿದ್ಯಾಮುಪಾಸತೇ । ತತೋಭೂಯ ಇವತೇತವೋಯ ಉ ವಿದ್ಯಾಯಾಂ ರತಾಃ"** ಎಂಬೀ ಈಶದ ಮಂತ್ರದಲ್ಲಿ ಅವಿದ್ಯೆಯಲ್ಲಿರತರಾದವರು ಹೋಗುವ ಕತ್ತಲೆಯ ಲೋಕಕ್ಕಿಂತ ಹೆಚ್ಚುಕತ್ತಲೆಯ ಲೋಕಕ್ಕೆ ವಿದ್ಯೆಯಲ್ಲಿರತರಾದವರು ಹೋಗುವರೆಂದು ಹೇಳಿದೆ. ವಿದ್ಯೆಯಲ್ಲಿರತರಾದವರು ಕತ್ತಲೆಯ ಲೋಕಕ್ಕೆ ಹೊಗುವರೆನ್ನುವುದೇ ಸರಿಯೆನಿಸಿದ್ದು ವಿದ್ಯೆಯಲ್ಲಿರತರಾದವರು ಅವಿದ್ಯೆಯವರು ಹೋಗುವ ಲೋಕಕ್ಕಿಂತ ಹೆಚ್ಚು ಕತ್ತಲೆಯ ಲೋಕಕ್ಕೆ ಹೋಗುವುದೆಂದರೆ ಆಶ್ಚರ್ಯವಾಗುವುದು. ಇದು ಹೇಗೆ ಸಾಧ್ಯ ಎನ್ನುವುದನ್ನು ಭಾಷ್ಯಕಾರರು ಬಿಡಿಸಿಲ್ಲ. ವಿದ್ಯೆಯೆಂದರೆ ಜ್ಞಾನ, ಅವಿದ್ಯೆಯೆಂದರೆ ಕರ್ಮವೆನ್ನುವುದರಲ್ಲಿ ಒಮ್ಮತವಿದೆ. ಚೆನ್ನಬಸವೇಶ್ವರ ವಚನದಂತೆ "ಕ್ರಿಯೆಯೇಜ್ಞಾನ; ಜ್ಞಾನವೇಕ್ರಿಯೆ. ಜ್ಞಾನವೆಂದರೆ ತಿಳಿಯುವುದು; ಕ್ರಿಯೆಯೆಂದರೆ ತಿಳಿದಂತೆಮಾಟುವುದು. ಪರಸ್ತ್ರೀ ಸಂಗವನ್ನು ಮಾಡಬಾರದೆನ್ನುವುದೇ ಜ್ಞಾನ; ಅದರಂತೆ ಆಚರಿಸುವುದೇ ಕ್ರಿಯೆ. ಈ ವಚನವೊಡನೆ ಈಶದ ಮಂತ್ರವನ್ನೋದಿದರೆ ಅರ್ಥವಾಗುವುದು. ಜ್ಞಾನವೆಂದರೆ ಅರಿವು; ಕರ್ಮವೆಂದರೆ ಕ್ರಿಯೆ. ಅರಿಯದಿರುದು ಒಳ್ಳೆಯದಲ್ಲ. ಆದರೂ ಅರಿಯದಿದ್ದರೂ ಸದಾಚಾರಿಯಾದವನಿಗಿಂತ ಅರಿದೂ ವ್ಯಭಿಚಾರಿಯಾಗಿರುವುದು ಹೆಚ್ಚುಕತ್ತಲೆಯ ಲೋಕಕ್ಕೆ ಹೋಗುವನೆಂಬುದು ಮೇಲಿನ ಈಶಾವಾಸ್ಯ ಮಂತ್ರದ ಅಭಿಪ್ರಾಯವೆಂಬುದು ಚೆನ್ನಬಸವೇಶನ ವಚನದಿಂದ ಸ್ಪಷ್ಟವಾಗುತ್ತದೆ.

## ವಚನ ವಾಙ್ಮಯಪಿತಾಮಹರು

ಹನ್ನೆರಡನೆಯ ಶತಮಾನದಲ್ಲಾದ ಉಗ್ರ ಧರ್ಮಕ್ರಾಂತಿಗೆ ಮೂಲ ಪುರುಷರಾದ ಬಸವ, ಚನ್ನಬಸವ, ಪ್ರಭುದೇವರೆಂಬ ತ್ರಿಮೂರ್ತಿಗಳೇ ವಚನ ವಾಙ್ಮಯದ ಜನಕರು. ಆಧರ್ಮಕ್ರಾಂತಿಯ ಉದ್ವೇಗವು ಅದಕ್ಕೆ



ತಕ್ಕ ಕೆಚ್ಚದೆಯ ಸ್ಫೂರ್ತಿಧಾಯಕ ವೀರ್ಯವತ್ ಭಾಷೆಯಲ್ಲಿ ಹೊರಹೊಮ್ಮಿತು. ವಚನಕಾರರು ಓದುಗರನ್ನು ಮೆಚ್ಚಿಸಲು ಯೋಚಿಸಿ ಬರೆದವುಗಳಲ್ಲ, ವಚನಗಳು. ಅವು ಬಸವಾದಿ ಪ್ರಮಥರ ಅಂತಃಸ್ಫೂರ್ತಿಯಿಂದ ಆವಿರ್ಭಾವವಾದುವುಗಳು. ಅವರ ಹೃದಯದ ಮಿಡಿತವು ವಚನ ರೂಪದಲ್ಲಿ ಮೂಡಿಬಂದು ಗದ್ಯದಲ್ಲಿಲ್ಲದ ಬಿಗುವನ್ನು ಅವಕ್ಕೆ ಕೊಟ್ಟಿತು. ಪದ್ಯದಂತೆಯೇ ಅವನ್ನು ಹೃದ್ಯವನ್ನಾಗಿ ಮಾಡಿತು. ಜನವಾಣಿಯಾಗಿದ್ದ ವಚನವು ದೇವವಾಣಿಯಾಯಿತು. ಪ್ರಭುದೇವರ ಮಾತಿನಲ್ಲಿ ಮಾತೇ ಜ್ಯೋತಿರ್ಲಿಂಗವಾಯಿತು. ಇದಕ್ಕೆ ಕಾರಣ ವಚನ ವಾಙ್ಮಯವು ವಚನ ವಾಙ್ಮಯ ಜನಕರ ಪರಿಶುದ್ಧಾಂತಃಕರಣದಿಂದ ಸ್ಫುರಣಗೊಂಡುದೇ ಆಗಿದೆ. ಹರಿಹರನ ಮಾತಿನಲ್ಲಿ –"ಬಸವರಾಜನ ಗುಣಗಳಂ ವರ್ಣಿಸಲಳವಲ್ಲ. ಶರಣರಂ ಸಂಗನೆಂದಲ್ಲದೆ ಕಾಣೆ; ನಿಚ್ಚಶಿವರಾತ್ರಿಯನಚ್ಚರಿಯಿಂ ಮಾಳ್ಪೆ; ಜಂಗಮ ಪ್ರಾಣಿಯಾಗಿಪ್ಪೆ; ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ; ನೋಡೆ; ನುಡಿಯೆ; ಮುಟ್ಟೆ; ಕೇಳೆ; ಶಿವಸಮಯವನ್ನುದ್ಧರಿಸುವೆ; ಲಿಂಗದಲ್ಲಿ ಕಠಿಣವ ಕೇಳೆ; ಜಂಗಮದಲ್ಲಿ ಜಾತಿಯನರಸೆ; ಪ್ರಸಾದದಲ್ಲಿ ಅಪವಿತ್ರತೆಯನರಿಯೆ; ಪರಾಂಗನೆಯರಂ ಹೆತ್ತ ತಾಯ್ಗಳೆಂಬೆ; ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ; ನಡೆದು ತಪ್ಪೆ; ನುಡಿದು ಹುಸಿಯೆ; ಹಿಡಿದುಬಿಡೆ; ಬಿಟ್ಟು ಹಿಂಗಲೀಯೆ; ಕೊಟ್ಟು ನೆನೆಯಲೀಯೆ." ಇಂತಹವರ ಹೃದಯಾಮೃತಸರೋವರವು ವಚನಸುಧೆಯಾಗಿ ಹರಿಯಿತು. ಇಂತಹ ವಚನಾಮೃತ ಪಾನಮಾಡಿದ ಶರಣರನೇಕರ ಹೃದಯವು ಪರಿಶುದ್ಧವಾಗಿ ವಚನಗಂಗೆಯನ್ನು ಹರಿಸಿತು. ಬಸವೇಶನು ವಚನಾಮೃತವೆಂಬ ಹಾಲನೆರೆದು ಬೆಳೆಸಿದ ಅವನ ಶಿಷ್ಯನೂ ಸೋದರಳಿಯನೂ ಆದವನು ಬಸವೇಶನೇ. ಆದರೆ ಅವನು ಬಸವೇಶ ಮಾತ್ರವೇ ಅಲ್ಲ, ಚೆನ್ನ ಬಸವೇಶ. ಅವನ ನುಡಿ ಚೆನ್ನ; ನಡೆಚೆನ್ನ; ಅರಿವೂಚೆನ್ನ, ಆಚಾರವೂ ಚೆನ್ನ; ವಿಚಾರವಂತೂ ಬಹು ಚೆನ್ನ. ವಚನ ವಾಙ್ಮಯವನ್ನು ಅಜ್ಞಾನ ತಮವನ್ನು ಹರಿಸುವ ಬೆಳಕಿಗೂ ಹೊಲಿಸ ಬಹುದು. ಬಸವೇಶನ ವಚನಗಳ ಬೆಳಗು ಬೆಳದಿಂಗುಗಳಿನಂತಹುದು; ಚೆನ್ನಬಸವೇಶನ ವಾಙ್ಮಯದ ಬೆಳಗು ವಿದ್ಯುಚ್ಛಕ್ತಿಯ ಬೆಳಗಿನಂತಿಹುದು. ಆ ವಿದ್ಯುಚ್ಛಕ್ತಿಯು ದುರ್ಗುಣಗಳನ್ನು ಪರಿಹರಿಸಲು ಶಕ್ತಿಯುಳ್ಳದ್ದು. ಪ್ರಭುವಿನ ವಾಙ್ಮಯ ಪ್ರಭೆಯು ಪರಂಜ್ಯೋತಿಯ ಬೆಳಗಿನಂತಿಹುದು. ಈ ವಚನ ವಾಙ್ಮಯ ಪಿತಾಮಹರ ವಾಙ್ಮಯ ಜ್ಯೋತಿಯಿಂದ ಪ್ರಭಾವಿತರಾಗಿ ದೇವರ ದಾಸಿಮಯ್ಯನಂತಹ ಅನೇಕ ಕಿರು ದೀವಿಗೆಗಳು ಬೆಳಗಿದವು. ಆದುದರಿಂದ ಹಿಂದೆ ಎಂದೂ ಹಿಂದೂ ಧರ್ಮದಲ್ಲಿಯೇ ಆದ ಅಂದಿನ ಕ್ರಾಂತಿಯ ಹೃದಯವಾಣಿಯಿಂದಲೇ ವಚನ ವಾಙ್ಮಯ ಹೊರಬಂದಿತು. ಹಿಂದೂ ಧರ್ಮ ಕ್ರಾಂತಿಕಾರರಾದ ಬಸವ, ಚೆನ್ನಬಸವ, ಪ್ರಭುದೇವಪ್ರಭೃತಿಗಳೇ ವಚನ ವಾಙ್ಮಯ ಜನಕರು. ಆ ಹಿಂದೆ ಅವರನ್ನು ಪ್ರಭಾವಗೊಳಿಸುವಂತಹ ಯಾವ ವಚನ ವಾಙ್ಮಯವೂ ಇರಲಿಲ್ಲ. ಅಂತಹ ವಚನ ವಾಙ್ಮಯವನ್ನು ಹೊರಹೊಮ್ಮಿಸಬಲ್ಲ ಧರ್ಮಕ್ರಾಂತಿಯೂ ಆಗಿರಲಿಲ್ಲ. ಬಸವ, ಚೆನ್ನಬಸವ, ಪ್ರಭುಗಳೆಸಗಿದ ತೀವ್ರತಮ ಧರ್ಮಕ್ರಾಂತಿಯ ಕಹಳೆಯ ಪ್ರಘೋಷವೇ ವಚನ ವಾಙ್ಮಯ.

'ಬಸವ ಪರುಷ' ಪುಟ ೧೩ ಮತ್ತು ೧೦ ರಲ್ಲಿ ಗಮನಿಸಿರುವಂತೆ ಬಸವ, ಅಲ್ಲಮಪ್ರಭು ಚೆನ್ನಬಸವೇಶ್ವರ ಇವರ ವಚನಗಳಲ್ಲಿ ದೊರೆಯುವ ಎಲ್ಲ ಲಕ್ಷಣಗಳಿಗೂ ಮೂಲ ಸ್ಥಾನ, ದೇವರದಾಸಿಮಯ್ಯ, ಎಂಬುದಾಗಿಯೂ ಮತ್ತು 'ಈತನೇ ಸದ್ಯಕ್ಕೆ ವಚನ ವಾಙ್ಮಯ ಮೂಲ ಪುರುಷ' ಎಂದೂ 'ವಚನ ಸಾರಾರಸ್ವತ ಬ್ರಹ್ಮ' ಎಂದೂ ಕರೆದಿರುವುದುಂಟು. ಬಸವ ಚೆನ್ನಬಸವ ಪ್ರಭುದೇವ ಪರಂಜ್ಯೋತಿಯಿಂದ ಬೆಳಗುವ ಕನ್ನಡಿಯಂತಹ ದೇವರ ದಾಸಿಮಯ್ಯನಿಂದ ಬಸವ, ಚೆನ್ನಬಸವ, ಪ್ರಭುದೇವ ಪ್ರಭೃತಿಗಳು ಪ್ರಭಾವಿತರಾದರೆನ್ನುವುದು ಮಿಂಚುಹುಳುವಿನ ಬೆಳಕಿನಿಂದ ನಕ್ಷತ್ರಗಳು ಬೆಳಗುತ್ತವೆ ಎನ್ನುವಷ್ಟು ಹಾಸ್ಯಾಸ್ಪದವಾಗಿದೆ. ಏಕೆಂದರೆ ವಿದ್ವಾಂಸರು ತೀರ್ಮಾನಿಸಿರುವಂತೆ ದೇವರದಾಸಿಮಯ್ಯನು ಬಸವಾದಿ ಪ್ರಮಥರ ಸಮಕಾಲೀನನು. ಆ ಕಾಲದಲ್ಲೇ ಸ್ವಲ್ಪ ಇತ್ತೀಚಿನವನಿದ್ದರೂ ಇರಬಹುದು. ಕಾರಣವೇನೆಂದರೆ, "ಕಷ್ಟಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಎನ್ನಕರ ಸ್ಥಲಕ್ಕೆ ಲಿಂಗವ.... ಬಸವಣ್ಣ" ಎಂದು ಬಸವಣ್ಣನನ್ನು ಹೋಗಳುವ ಡೋಹರ ಕಕ್ಕಯ್ಯನನ್ನು ದೇವರ ದಾಸಿಮಯ್ಯ ತನ್ನ ವಚನದಲ್ಲಿ ಹೊಗಳುವನು. ರಾಮನಾಥ ಎಂಬ ಅಂಕಿತವುಳ್ಳ ಈ ದೇವರದಾಸಿಮಯ್ಯನ ಹೆಂಡತಿ 'ದಾಸಪ್ರಿಯ ರಾಮನಾಥ' ಎಂಬ ಅಂಕಿತವುಳ್ಳ ವಚನದಲ್ಲಿ "ಭಕ್ತನಾದರೆ ಬಸವಣ್ಣನಂತಾಗ ಬೇಕು, ಜಂಗಮವಾದರೆ ಪ್ರಭುದೇವರಂತಾಗ ಬೇಕು; ಯೋಗಿಯಾದರೆ ಸಿದ್ಧರಾಮನಂತಾಗಬೇಕು; ಭೋಗಿಯಾದರೆ ಚೆನ್ನಬಸವಣ್ಣನಂತಾಗ ಬೇಕು" ಇತ್ಯಾದಿಯಾಗಿ ಹೊಗಳಿದ್ದಾಳೆ. "ತೊರೆಯೊ

ಳಗೆ ಬಿದ್ದಲಿಂಗ ಕರೆದರೆ ಬಂದುದುಕರಸ್ಥಳಕ್ಕೆ" ಎಂದು ದೇವರದಾಸಿಮಯ್ಯನ ವಚನದಲ್ಲಿ ಹೊಗಳಿರುವ ಕೇಶಿರಾಜನು ಕ್ರಿ. ಶ. ೧೧೦೨ ಇದ್ದನೆಂದು ಡಾ. ಎಂ. ಎಂ. ಕಲಬುರ್ಗಿಯವರು ಶಿಲಾ ಶಾಸನಾಧಾರದಿಂದ ನಿರ್ಧರಿಸಿದ್ದಾರೆ. ಆದ್ದರಿಂದ ಕೇಶಿರಾಜನನ್ನು ಹೊಗಳಿರುವ ದೇವರದಾಸಿಯು ಅದಕ್ಕಿಂತಲೂ ಸುಮಾರು ಒಂದು ಶತಮಾನದ ಹಿಂದೆ ಇದ್ದ ಜಯಸಿಂಹ (ಕ್ರಿ. ಶ. ೧೦೧೫-೧೦೪೨) ನ ಗುರುವಾಗಿರಲಾರನು. ಜಯಸಿಂಹನ ಕಾಲದ ಜೇಡರ ದಾಸಿಯು ಆಗ ೩೦-೪೦ ವರ್ಷದವನಾಗಿದ್ದರೂ ಬಸವೇಶ್ವರನ ಕಾಲದಲ್ಲಿ ಬದುಕಿರಲಾರನು. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ (ಸಂ-೩,-ಪು-೯೩) ಗಮನಿಸಿರುವಂತೆ ಜೇಡರ ದಾಸಿಮಯ್ಯನೇ ದೇವರ ದಾಸಿಮಯ್ಯನೆಂಬ ವಾದವನ್ನು ಈಗ ಕೈಬಿಡಬೇಕಾಗುತ್ತದೆ. ಜೇಡರ ದಾಸಿಮಯ್ಯ ಮತ್ತು ದೇವರದಾಸಿಮಯ್ಯ ಇವರಿಬ್ಬರ ಇಷ್ಟದೇವರು ರಾಮನಾಥನೇ ಆದಕಾರಣ ಇವರಿಬ್ಬರು ಒಂದೇ ಎಂದುನಂಬಲು ಕಾರಣವಾಗಿರ ಬೇಕು. ಜಯಸಿಂಹನು ಜೈನನೇ ಅಲ್ಲವೆಂದು ಅವನ ಶಾಸನಗಗಳಿಂದ ನಿರ್ಧರಿಸಿ ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಅನೇಕ ದಾಸಿಮಯ್ಯಗಳ ಹೆಸರಿರುವುದನ್ನು ಗಮನಿಸಿ ಡಾ. ಎಸ್. ಶ್ರೀಕಂಠ ಶಾಸ್ತ್ರಿಗಳು 'ದೇವರದಾಸಿಮಯ್ಯ ಪ್ರಶಸ್ತಿ' ಗ್ರಂಥದಲ್ಲಿ "ಮುದನೂರು ದಾಸಿಮಯ್ಯನ ಸಂಬಂಧವಾದ ಕಥೆಗಳು ಹುಟ್ಟಿ ಬಿಜ್ಜಳನ ಹಿರಿಯ ಸಮಕಾಲಿನನಾದ ದೇವರದಾಸಿಮಯ್ಯನಿಗೆ ಅನ್ವಯಿಲ್ಪಟ್ಟವೆಂದು ತಾತ್ಕಾಲಿಕವಾಗಿ ಹೇಳಬಹುದು" ಎಂದು ಬಹಳ ಹಿಂದೆಯೇ ನಿರ್ಧರಿಸಿದ್ದಾರೆ. ಮುದನೂರು ಜೇಡರ ದಾಸಿಯು ಜಯಸಿಂಹನ ಸಮಕಾಲೀನನೆಂಬುದು ಹರಿಹರನ ರಗಳೆಯಿಂದ ತಿಳಿದು ಬರುತ್ತದೆ. ಆದರೆ ಅದರಲ್ಲಿ ಜೇಡರ ದಾಸಿಯು ಜಯಸಿಂಹನನ್ನು ಮತಾಂತರಿಸಿದುದನ್ನು ಹೇಳಿಲ್ಲ; ದೇವರದಾಸಿಮಯ್ಯನಿಗೂ, ಜಯಸಿಂಹನಿಗೂ ಸಂಬಂಧಿಸಿದಂತೆ ಹೇಳಿರುವ ಕಥೆ ಕಟ್ಟುಕಥೆ. ದಿವಾಕರರ ವಚನಶಾಸ್ತ್ರ ರಹಸ್ಯದ ಪೀಠಿಕೆಯಲ್ಲಿ ಹೇಳಿದಂತೆ "ವೇದ ಉಪನಿಷತ್ತು ಮತ್ತು ಆಗಮಾದಿಗಳಲ್ಲಿ ಉಕ್ತವಾದ ಅಬಾಧಿತ, ಸನಾತನ, ಉದಾತ್ತ ವಿಚಾರಗಳೇ ಈ ಶಾಸ್ತ್ರಕ್ಕೆ ಆಧಾರ ಭೂತವಾದವುಗಳು; ಅವುಗಳ ಕರ್ತೃಗಳೇ ವಚನಕಾರರಿಗೆ ಆದ್ಯರು. ಆದರೆ ವೇದೋಪನಿಷದಾಗಮುಗಳಲ್ಲಿ ಹೇಳಿರುವುದೆಲ್ಲ ಸರಿಯೆಂದು ವಚನಕಾಸರು ಒಪ್ಪಿಕೊಳ್ಳಲಿಲ್ಲ. ವೇದಗಳಲ್ಲಿನ ಕರ್ಮಕಾಂಡವನ್ನು ನಿರಾಕರಿಸಿ ಜ್ಞಾನಕಾಂಡಕ್ಕೆ ಪ್ರಾಮುಖ್ಯವನ್ನು ಕೊಟ್ಟರು. ಆಗಮೋಕ್ತ ಆಚಾರಗಳ ಅಪಯೋಗದ ಅಥವಾ ಅತಿರೇಕದ ಮೂಲಕ ಸಮಾಜದಲ್ಲಿ ಬೆಳೆದ ಅನೇಕ ದೋಷಗಳನ್ನು ವಚನಕಾರರು ಒಳ್ಳೇ ನೇರವಾಗಿ ಬಲವುಳ್ಳ ಭಾಷೆಯಲ್ಲಿ ಖಂಡಿಸಿ, ಕುಗ್ಗಿಸಿ ಆಗಮುಗಳಿಗಿಂತ ಒಂದು ಹೆಜ್ಜೆ ಮುಂದೆಯೇ ಹೋದರೆನ್ನ ಬಹುದು". (ವ. ಶಾ. ರಹಸ್ಯ ಪು-೨೮) 'ತಿರುವಳ್ಳವರ್' ಅಂತಹ ತಮಿಳು ದೇಶದ ಶರಣರೂ ಆದ್ಯರೇ. ಅವರ ವಚನವೂ ಆದ್ಯರ ವಚನ. ಹೀಗೆ ಬಸವ, ಚೆನ್ನಬಸವ, ಪ್ರಭುದೇವ ಪ್ರಭೃತಿಗಳು ಹಿಂದೂ ಧರ್ಮದಲ್ಲಿದ್ದ ಶ್ರೇಷ್ಠವಾದುದನ್ನೆಲ್ಲ ಗ್ರಹಿಸಿ, ಅನಿಷ್ಟವಾದುದನ್ನೆಲ್ಲ ಧೈರ್ಯದಿಂದ ತ್ಯಜಿಸಿ ಹಿಂದೆಂದೂ ಆಗದಿದ್ದಷ್ಟು ಉಗ್ರವಾದ ಧರ್ಮಕ್ರಾಂತಿಯನ್ನು ಪ್ರಾರಂಭಿಸಿದಾಗ ಆ ಧರ್ಮಕ್ರಾಂತಿಯ ಫಲವಾಗಿಯೇ ಜನಿಸಿತು, ವಚನವಾಙ್ಮಯ. ಈ ಧರ್ಮಕ್ರಾಂತಿಯ ಹಾಗು ತತ್ಫಲವಾದ ವಚನವಾಙ್ಮಯದ ಜನಕರು ಬಸವ, ಚೆನ್ನಬಸವ ಪ್ರಭುದೇವ ತ್ರಿಮೂರ್ತಿಗಳು. ಈ ಧರ್ಮಕ್ರಾಂತಿಯನ್ನು ವಚನವಾಙ್ಮಯವನ್ನು ಮುಂದುವರಿಸಿದವರು ದೇವರದಾಸಿಮಾರ್ಯಾದಿ ಹಿರಿಯ ವಚನಕಾರರು.

**ಬಸವೇಶ್ವರಾದಿ** ಶರಣರಿಂದ ಸಂಸ್ಕರಿಸಲ್ಪಟ್ಟ ಲಿಂಗಾಧಾರೀ ಧರ್ಮಕ್ಕೆ ಪ್ರಚಲಿತವಾಗಿರುವ ವೀರಶೈವ ಎಂಬ ಹೆಸರು ಚನ್ನಬಸವೇಶ್ವರನ ಕೊಡುಗೆ. ಬಸವೇಶ್ವರನ ವಚನದಲ್ಲಾಗಲಿ, ಬಸವರಾಜ ದೇವರ ರಗಳೆಯಲ್ಲಾಗಲಿ, ಸಮಿಾಪ ಕಾಲದ ಹರಿಹರ ರಾಘವಾಂಕ ಕವಿಗಳ ಯಾವ ಗ್ರಂಥದಲ್ಲಾಗಲಿ, ಆಗಿನ ಯಾವ ಶಾಸನಗಳಲ್ಲಾಗಲಿ 'ವೀರಶೈವ' ಎಂಬ ಹೆಸರು ಕಂಡು ಬರುವುದಿಲ್ಲ. ಚನ್ನಬಸವೇಶ್ವರ ವಚನ ಸಾಹಿತ್ಯದಲ್ಲಿ ವೀರಶೈವ ಪದವು ಸಂಸ್ಕರಿಸಲ್ಪಟ್ಟ ಲಿಂಗಧಾರೀ ಧರ್ಮದ ಹೆಸರಾಗಿ ಪ್ರಪ್ರಥಮ ಕಾಣಿಸಿಕೊಳ್ಳುತ್ತದೆ. ಮಹೇಶ್ವರ ಜಂಗಮ, ಶುದ್ಧಶೈವದ ಹೆಸರುಗಳು ಬಸವರಾಜ ದೇವರ ರಗಳೆಯೇ ಮೊದಲಾದ ಗ್ರಂಥಗಳಲ್ಲಿ ಕಂಡು ಬರುತ್ತವೆ. ಬಸವರಾಜ ದೇವರ ರಗಳೆಯಲ್ಲಿ ಬಸವೇಶನು "**ಶುದ್ಧ ಶೈವ ಸರೋ ನಿಧಿ ತರಂಗ ಮಾಲಾ ನಿಮಗ್ನ ಚಿತ್ತನಾಗಿರ್ದಂ**" ಎಂದು ಹೇಳಿರುವುದರಿಂದ



ಬಸವ ಪೂರ್ವಲಿಂಗ ಧಾರಿಗಳಿಗೆ 'ಶುದ್ಧಶೈವ' ಎಂಬ ಹೆಸರು ಪ್ರಚಲಿತವಾಗಿದ್ದವೆನ್ನ ಬಹುದು.

**ಬಸವೇಶ ಚನ್ನ ಬಸವೇಶರು ಹುಟ್ಟಿದ ಕಮ್ಮೆ ಕುಲದಲ್ಲಿ ಲಿಂಗಯಜ್ಞೋಪವೀತವನ್ನು ಧರಿಸುವ ಪದ್ಧತಿ ಇದ್ದಿತು :**

ಕಮ್ಮೆಕುಲದಲ್ಲಿ ಲಿಂಗಧಾರಣೆಯ ಪದ್ಧತಿಯಿರಲಿಲ್ಲ.ವೆಂಬ ಕಪಟರಾಳ ಕೃಷ್ಣರಾಯರ ಅಭಿಪ್ರಾಯ ಸರಿಯಲ್ಲವೆಂದು ಯಾರು ತೋರಿಸದಂತೆ ಕಾಣುವುದಿಲ್ಲ. "ಲಿಂಗಯಜ್ಞೋಪವೀತ ಧಾರೀ ವೀರಶೈವ ಬ್ರಾಹ್ಮಣೋತ್ತಮಂ" ಎಂದು ವಿರೂಪಾಕ್ಷ ಪಂಡಿತನು ಕರೆದಿರುವ ಪದ್ಮರಸನು, ಕವಿ ಚರಿತ್ರೆಯಲ್ಲಿ ಹೇಳಿರುವಂತೆ "ಕಮ್ಮೆ ಕುಲವಲ್ಲಭ ಗೌರಪನ ಅಕ್ಕ ಮಂಗಳೆಯ ಮಗನು. ಶ್ರೀಕರಭಾಷ್ಯದಲ್ಲಿ "ಶ್ರೀ ಮು ದ್ದಂ ಡ ಶಿಖೋಪವೀತ" ನೆಂದು ಹೊಗಳಲ್ಪಟ್ಟ ಪಂಚಾಚಾರ್ಯರಲ್ಲಿ ಒಬ್ಬನಾದ ಏಕೋರಾಮನು ಏ ಕೋ ರಾ ಮ ಪುರಾಣದಲ್ಲಿ ಹೇಳಿರುವಂತೆ ಕಮ್ಮೆ ಕುಲದ ರಾಮಭದ್ರಾಚಾರಿಯ ಮಗನು. ಆದುದರಿಂದ ಬಸವೇಶ ಚೆನ್ನಬಸವೇಶರು ಹುಟ್ಟಿದ ಕಮ್ಮೆ ಕುಲದಲ್ಲಿ ಲಿಂಗಯಜ್ಞೋಪವೀತವನ್ನು ಧರಿಸುವ ಪದ್ಧತಿಯಿದ್ದಿತು. ರಾಘವಾಂಕ ಚರಿತೆಯಲ್ಲಿ ಹೇಳಿದಂತೆ ರಾಘವಾಂಕನ ಮಾವ ಹರಿಹರನು "ಶಿರದೊಳೆಸೆವ ಲಿಂಗದಿ ಯಜ್ಞಸೂತ್ರದಿಂ" ರಂಜಿಸುತ್ತಿದ್ದನು-ಎಂಬುದು ಇದನ್ನು ಸಮರ್ಥಿಸುತ್ತದೆ.

ಲಿಂಗವನ್ನು ಧರಿಸಿದ್ಧ ಶುದ್ದ ಶೈವರನ್ನಾಗಿ ಸಂಸ್ಕರಿಸಿದಾಗ ಹಿಂದೆ ಶೈವ ಗುರುವಿನಿಂದ ಪಡೆದ ಲಿಂಗವನ್ನು ತ್ಯಜಿಸಿ, ಬೇರೆಲಿಂಗವನ್ನು ವೀರಶೈವ ಗುರುವಿನಿಂದ ಪಡೆಯ ಬೇಕೇ ಎಂಬುದೇ ಮೊದಲಾದ ಸಮಸ್ಯೆಗಳು ಉದ್ಭವವಾದವು. ಚಂದ್ರಜ್ಞಾನಾಗಮದಲ್ಲಿ ಇಷ್ಟಲಿಂಗ ಕಳೆದು ಹೋದರೆ ಪ್ರಾಣ ಬಿಡಬೇಕು "ಇಷ್ಟಲಿಂಗ ವಿಯೋಗೇವಾ ವ್ರತಾನಾಂ ಪರಿಚ್ಯುತೌ ತೃಣವತ್ ಪ್ರಾಣಸಂತ್ಯಾಗ ಇತಿವೀರವ್ರತಂ ಮತಂ" ಎಂದು ಹೇಳಿದೆ. ಇದು ಸರಿಯೋ ಎಂದು ನಿರ್ಧರಿಸಬೇಕಾಯಿತು. ಇಂತಹ ಸಮಸ್ಯೆಗಳನ್ನೆಲ್ಲ ಸಮರ್ಪಕವಾಗಿ ಬಿಡಿಸಿದುದು ಚೆನ್ನಬಸವ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಮರಣವ್ರತಧಾರಿಗಳಾಗಿ ಅಗ್ನಿಯಲ್ಲಿಯೋ ನೀರಿನಲ್ಲಿಯೋ ಬಿದ್ದು, ಪ್ರಾಣಬಿಡುವುದನ್ನು 'ಆತ್ಮಹನೋಜನಾಃ' ಎಂದು ನಿಂದಿಸಿ ಈಶಾವಾಸ್ಯದ ಮೂರನೆಯ ಮಂತ್ರವು ಅದನ್ನು ಖಂಡಿಸಲು, ರಚಿತವಾದಂತಿದೆ. ಚೆನ್ನಬಸವಣ್ಣನ ವಚನವಿದು:

> "ಪ್ರತಿಯಿಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವನ್ನಿಕ್ಕಿ ಕೊಂಡು, ಆತ್ಮಘಾತವ ಮಾಡಿಕೊಂಬ ದ್ರೋಹಿಯ ಮುಖವ ನೋಡಲಾಗದು. ಅದೆಂತೆಂದೊಡೆ ಮಂತ್ರ ಭಿನ್ನವಿಲ್ಲವಾಗಿ ಪೂಜೆಭಿನ್ನವಿಲ್ಲ; ....ಆತ್ಮಘಾತವ ಮಾಡುವ ಪಾತಕಿಗಳನೇನೆಂಬೆ ಕೂಡಲ ಚೆನ್ನಸಂಗಮದೇವ."

ಲಿಂಗವನು ಪ್ರತಿಷ್ಠಿಸುವ ಮಂತ್ರವಿರುವಾಗ ಮತ್ತೊಂದು ಲಿಂಗವನ್ನು ಗುರುವಿನಿಂದ ಪಡೆಯ ಬೇಕೇ ಹೊರತು, ಆತ್ಮಘಾತವ ಮಾಡಬಾರದೆಂದರ್ಥ.

> "ಶೈವಗುರುವಿನ ಕಯ್ಯಲ್ಲಿ ಮಂತ್ರೋಪದಿಷ್ಟನಾದ ಶಿಷ್ಯಂಗೆ ವೀರಶೈವಮಂತ್ರೋಪದೇಶದಿಂ ಆತನ ಕಾಯಶುದ್ಧಾತ್ಮನ ಮಾಡಿ, ಆತನ ಲಿಂಗಕ್ಕೆ ಪ್ರಾಣಪ್ರತಿಷ್ಠೆಯಂ ತುಂಬಿ, ಆತನ ಅಂಗದ ಮೇಲೆಲಿಂಗವಂ ಬಿಜಯಂಗೈಸಿ, ಕೃತಕೃತ್ಯನಂ ಮಾಡಿದ ನಮ್ಮ ವೀರಶೈವ ಗುರು ಕೂಡಲ ಚೆನ್ನಸಂಗಮದೇವ."

ಶೈವಗುರುವು ಕೊಟ್ಟಿದ್ದ ಲಿಂಗವನ್ನು ತ್ಯಜಿಸದೆ ಅದಕ್ಕೆ ವೀರಶೈವ ಗುರುವಿನಿಂದ ಪ್ರಾಣಪ್ರತಿಷ್ಠೆಯನ್ನು ಮಾಡಬೇಕೆಂಬುದು ಸಿದ್ಧಾಂತ. ಇಂತಹ ಅನೇಕ ಕ್ಲಿಷ್ಟ ಸಮಸ್ಯೆಗಳನ್ನು ಚೆನ್ನಬಸವೇಶನು ಸಮರ್ಪಕವಾಗಿ ಪರಿಹರಿಸಿ, ಸಿದ್ಧಾಂತಗಳನ್ನು ವ್ಯವಸ್ಥೆಗೊಳಿಸಿರುವುದನ್ನು ಬಸವೇಶನ ಈ ವಚನದಿಂದ ತಿಳಿಯ ಬಹುದು.

> "ಶಿವಾಚಾರದ ವಿಚಾರವನರಿಯದೆ, ಜಗವು ಕೆಟ್ಟಹುದೆಂದು ಪರಮಪುರುಷಾರ್ಥಕಾರಣವಾಗಿ, ಮರ್ತ್ಯಲೋಕದಲ್ಲಿ ಅವತರಿಸಿ, ಗುರುಲಿಂಗಜಂಗಮ ಪಾದೋದಕ ಪ್ರಸಾದವೆಂಬ ಪಂಚಾಚಾರವನೆಲೆಗೊಳಿಸಿ, ಷಟ್‌ಸ್ಥಲವೆಂಬ ಮಹಾನುಭಾವಮಂ ಕರತಲಾಮಲಕವಾಗಿ ಸ್ಥಲಗೊಳಿಸಿ, ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ಭೇದವನೆನಗೆ ತಿಳುಪಿ, ಎನ್ನ ಭ್ರಾಂತಿಸೂತಕವ ಬಿಡಿಸಿ, ಲಿಂಗೈಕ್ಯವೆಂಬುದುನೆನಗೆ ತೋರಿದೆಯಾಗಿ ನಿನ್ನಿಂದಾನು ಸಂಗನ ಬಸವಣ್ಣನೆಂಬ ಹೆಸರು ಪಡೆದೆನು ಕೂಡಲ ಸಂಗಮ ದೇವರ ಸಾಕ್ಷಿಯಾಗಿ ಎನಗೆ ನೀನು ಪರಮಾರಾಧ್ಯಕಾಣಾ ಚೆನ್ನಬಸವಣ್ಣ"

ಹೀಗೆ ಬಸವಣ್ಣನು ಚೆನ್ನಬಸವಣ್ಣನನ್ನು ತನ್ನ ಗುರುವೆಂದು ಹೇಳಿರುವನಾದರೆ, ಚೆನ್ನಬಸವೇಶನ ವಚನವೊಂದರಲ್ಲಿ, "ಎನಗೆನ್ನಗುರು ಬಸವಣ್ಣ ತೋರಿದ ಘನ"

(18 ನೇ ಪುಟ ನೋಡಿ)

[ಹಿಂದಿನ ಸಂಚಿಕೆಯಿಂದ]



# ದುಃಸ್ವಪ್ನ

—ಇಂದುಮತಿ ಹಿರೇಮಠ

ಅಯ್ಯೋ! ಶೀಲಾ, ಅವನು ಎಲ್ಲಿಯವನೋ? ಏನೋ? ಯಾವ ಜಾತಿಯೋ? ಅವನ ಬಲೆಗೆ ನೀ ಹ್ಯಾಗೆ ಬಿದ್ದಿಯೇ? ನನ್ನ ಗೆಳತಿ ಶಾಂಭವಿಯ ಮಗಳು, ಇಷ್ಟು ಅವಿವೇಕಿ ಹೇಗಾದಳು. ಅಯ್ಯೋ ನಿನ್ನಮ್ಮ ಮಾನವತಿ. ಶೀಲಕ್ಕಾಗಿ ಪ್ರಾಣವನ್ನು ಕೊಡುವವಳು. ಸಾಕು ಮಾಡಿ ಚಿಕ್ಕಮ್ಮಾ! ನಾನು ಈ ನಾಲ್ಕುದಿನ ಓಡಾಡಿದ್ದಕ್ಕೆ ಮಾನವನ್ನು ಕಳೆದುಕೊಳ್ಳುವ ಪ್ರಸಂಗವೇನೂ ಬರಲಿಲ್ಲ. ಈ ನಾಲ್ಕಾರು ದಿನದಲ್ಲಿ ಒಂದು ಸಣ್ಣ ಮಾತನ್ನು ಕೂಡಾ ಆಡಿಲ್ಲ, ಬಂದು ಕುಳಿತಾಗ ನನ್ನ ಕೈ ಹಿಡಿಯಲು ಬಂದರೂ ನಾನು ಸರಕ್ಕನೇ ಹಿಂದಕ್ಕೆಳೆದು ಕೊಂಡೆ. ಕ್ಷಮೆ ಕೇಳಿಕೊಂಡು ಎಷ್ಟೊಂದು ಪಾಶ್ಚಾತ್ತಾಪ ಪಟ್ಟುಕೊಂಡರು ಗೊತ್ತೋ? ಅವರಿಗೂ ಮಡಿಕೇರಿ ಹತ್ತಿರ ಕಾಫಿ ತೋಟವಿದೆಯಂತೆ. ಮನೆಯಲ್ಲಿ ತಂದೆ ಒಬ್ಬರೇ ಇವರ ಯಾವ ಅಭಿಪ್ರಾಯಕ್ಕೂ ಅವರು ಒಪ್ಪಿಗೆ ಕೊಡುತ್ತಾರಂತೆ. ಅವರು ಪ್ರೀತಿಸುತ್ತಿರುವುದು ನನ್ನ ದುಡ್ಡನ್ನಲ್ಲಾ. ನನ್ನನ್ನು ಧರ್ಮ ಪ್ರಕಾರವೇ ಮದುವೆ ಮಾಡಿಕೊಳ್ಳೋಣ ಅಂದಿರುವರು. ಅವರ ಬಗ್ಗೆ ನಿಮಗ್ಯಾರೋ ಸುಳ್ಳು ಸುದ್ದಿ ಕೊಟ್ಟದ್ದಾರೆ. ನಾನು ಮೆಚ್ಚಿಕೊಂಡಿದ್ದು ಅವರ ಗಂಭೀರ ಪ್ರಕೃತಿಯನ್ನು. ಅಷ್ಟರಲ್ಲಿ ನನ್ನ ದೊಡ್ಡ ಮಗ ಸದಾಶಿವ ಬಾಗಿಲ ದೂಡಿಕೊಂಡು ಒಳಗೆ ಬಂದನು.

ಏನಮ್ಮ! ಏನೋನೊ, ನಡೆದಿದೆ ದೇವದಾಸ ಪುರಾಣ. ಶೀಲಮ್ಮನವರೇ ನಿಮ್ಮದೇನೂ ತಪ್ಪಿಲ್ಲ, ಇದರಲ್ಲಿ ಮಧ್ಯಾಹ್ನ ಸೋಮು ಬಂದು ಹೇಳಿದ. ತಕ್ಷಣವೇ ಹೊರಟೆ ತನಿಖೆಗೆ, ಮುಗಿಸಿಕೊಂಡೇ ಬಂದೆ. ಸದ್ಯ ನೀನು ಸ್ವಲ್ಪ ಮುಖ ಕೈಕಾಲು ತೊಳೆದುಕೊಂಡು ಕೂಲಾಗಿ ಬಾ. ಕಾಫಿ ಕುಡ್ದುಬಿಟ್ಟು ಮಾತಾಡೋಣ ನಿದಾನವಾಗಿ. ಅಮ್ಮಾ! ಎಲ್ಲರಿಗೂ ಪಸ್ಟಕ್ಲಾಸ್ ಸ್ಟ್ರಾಂಗ್ ಕಾಫಿ ಬರಲಿ ವಿಷಯವೂ ಅಷ್ಟೇ ಸ್ಟ್ರಾಂಗಾಗಿದೆ, ಎಂದ. ಸರಿಯಪ್ಪಾ ಬೇಗ ಹೇಳಿಬಿಡು ನಿನ್ನ ಸುಳ್ಳು ಸುದ್ದಿ ಸಂಗ್ರಹವನ್ನು ಅದಕ್ಕೆಲ್ಲಾ ಕಾಫಿ ಅದು ಇದು ಟ್ರೀಟ್‌ಮೆಂಟ್ ಎಲ್ಲಾ ಯಾಕೆ ಬೇಕು ಕೇಳಿ ಹೋಗುತ್ತೇನೆ ಮನೆಗೆ.

ಅವಸರದಲ್ಲಿ ಹೇಳುವದಲ್ಲಾ ಮರಿ! ಅದೂ ನನಗೂ ಕಾಫಿ ಬೇಕಾಗಿದೆಯಲ್ಲಾ! ಮೊದಲು ನೀನು ಕೈಕಾಲು ತೊಳಕೊಂಡು ಬಂದು ಕಾಫಿ ತಕ್ಕೊಂಡರೇ ನಾನು ಹೇಳುವದು ಇಲ್ಲದಿದ್ದನಾನೂ ಹೇಳುವದಿಲ್ಲ. ಹೋಗಮ್ಮಾ; ಜಾಣೆ ನಮ್ಮ ಶೀಲು. ದುಮುಗುಡುತ್ತ ಒಳಗೆ ಹೋಗಿ ಕೈಕಾಲು ತೊಳೆದುಕೊಂಡು ಬಂದಳು. ಅಮ್ಮ ಎಲ್ಲರಿಗೂ ಕಾಫಿ ಚಕ್ಕುಲಿ ತಂದುಕೊಟ್ಟರು. ಅಮ್ಮಾ ನೀನೂ ಇಲ್ಲೇ ತೆಗೆದುಕೊಂಡು ಬಾ ಎಲ್ಲರೂ ಮೊದಲು ಕಾಫಿ ಮುಗಿಸೋಣ ಅಂದೆ. ಹೂಂ ಇನ್ನು ಹೇಳಪ್ಪಾ! ಅಂದಳು ಶೀಲ ಬೇಜಾರದಿಂದ. ನೋಡು ಶೀಲಾ ನೀನು ಈ ವಿಷಯವನ್ನು ಸ್ವಲ್ಪ ಆಳವಾಗಿ ವಿಚಾರಿಸಬೇಕು. ಹುಚ್ಚುಚ್ಚಾಗಿ ಅಮ್ಮನ ಜೊತೆ ವಾದ ಹಾಕಿದ ಹಾಗಲ್ಲಾ. ನನ್ನದೇ ಬೇರೆ. ನಿಮ್ಮ ಕಾಲೇಜಲ್ಲಿ ಮೀರಾ ಅಂತಾ ಇದ್ದಳು ನಿನಗೆ ಗೊತ್ತಾ, ಅಂದ ಹಾಗೆ ಅವನು ನಿನ್ನನ್ನು ಎಲ್ಲಿಯೂ ಪಿಕ್‌ನಿಕ್‌ಗೆ ಕರೆದುಕೊಂಡು ಹೋಗಿಲ್ವಲ್ಲ? ಸದ್ಯ–ಸದೂ; ನೀನ್ಯಾವ ವಿಷಯ:ವನ್ನು ಹೇಳುತ್ತಿರುವೇ? ಪಿಕ್‌ನಿಕ್‌ಗೆ ಈಗಹೋಗಬೇಕೆಂದಿದ್ದೆವು ಎಲ್ಲಿಗೇಂತ ಇನ್ನು ನಿರ್ಧಾರ ಆಗಿರಲಿಲ್ಲ. ಅವರ ಮೇಲೆ ನನಗೆ ಪೂರ್ಣ ವಿಶ್ವಾಸವಿದೆ. ಸರಿ ಆ ಮೀರಳ ವಿಷಯವೇಕೆ ಬಂತು ಈಗ.



ಅದೇ ಇರುವದು ನೋಡು ಮಧ್ಯ ಬಿಂದು. ಆ ಮೀರಳನ್ನ ಅವನು ನಿನ್ನ ಹಾಗೆನೇ ಬಲೆಗೆ ಹಾಕಿಕೊಂಡ, ಅವಳೂ ಒಬ್ಬಳೇ ಮಗಳು. ಶ್ರೀಮಂತರು. ತಂದೆ ಇಲ್ಲ. ಆ ಹುಡುಗಿಗೂ ಹೀಗೆ ಮಾತಿನಿಂದ ಮರಳು ಮಾಡಿ ಆಕೆಯಿಂದ ದುಡ್ಡು ಕಿತ್ತುಕೊಂಡು ಒಂದು ದಿನ ಮೈಸೂರಿಗೆ ಕರಕೊಂಡು ಹೋಗಿ, ಅವಳ ಶೀಲಹರಣವನ್ನು ಮಾಡಿದ. ಆ ಮಗನಿಗೆ ರೂಪು ತುಂಬಾ ಅನುಕೂಲ ಆಗಿದೆ. ಚನ್ನಾಗಿ ಮಾತನಾಡ ಬಲ್ಲ, ಆದೊಂದು ಕಲೆಯೇ ಅವನಿಗೆ ಅದರಲ್ಲಿ ಮೋಸದ ಸುಳಿವೇ ಸಿಕ್ಕಲ್ಲ. ಓ ಸದೂ ನಿನ್ನ ಕಲ್ಪನಾಶಕ್ತಿ ಚೆನ್ನಾಗಿದೆ ಬಿಡು ಕನ್ನಡ ಆನರ್ಸ ಅಲ್ವೇ? ಸಾರ್ಥಕ ಆಯ್ತು-

ಹೌದು ಶೀಲಾ! ಇನ್ನು ಮುಂದಿನ ಪುರಾಣ ಕೇಳು ಸಾರ್ಥಕ ಯಾರಿಗೆ ಆಗುತ್ತೆ ಹೇಳುವಂತೆ. ಈ ಹೊತ್ತು ಸೋಮು ಬಂದು ಹೇಳಿದ ತಕ್ಷಣ ನನ್ನ ಗೆಳೆಯ ಚಂದ್ರುನನ್ನು ಕರೆದುಕೊಂಡು ಮೀರಳ ಮನೆಗೆ ಹೋದೆ. ಇದ್ದ ಒಬ್ಬ ಮಗಳನ್ನು ಕಳೆದುಕೊಂಡ ಆ ತಾಯಿಯ ಗತಿ ಯಾವ ಶತ್ರುವಿಗೂ ಬೇಡ. ನಾನು ಇದ್ದ ಪರಿಸ್ಥಿತಿ ಎಲ್ಲಾ ಹೇಳಿದ ಮೇಲೆ ಆ ತಾಯಿ ನನಗಂತೂ ಏನೂ ತಿಳಿಯಲಿಲ್ಲಪ್ಪಾ ಹೆಣವನ್ನು ತಪಾಸಿಸಿದ ಡಾ. ಮೂರು ತಿಂಗಳ ಗರ್ಭಿಣಿ ಇದ್ಲು ಅಂತಾ ಹೇಳಿದ್ದಕ್ಕೆ ನಾನು ನನ್ನ ವಸ್ತುವೇ ಹೋದ ಬಳಿಕ ಯಾಕೆ ಹೆಚ್ಚಿನ ಗಲಾಟೆ ಬೇಕು ಅಂತಾ ಬಿಟ್ಟೆ. ನನ್ನ ಒಡಲ ತುಂಬಾ ಅಗ್ನಿಯೇ ತುಂಬಿದೆ. ದಯಮಾಡಿ ನನ್ನ ಮೇಲೆ ವಿಶ್ವಾಸವಿಡಿ ನಿಮ್ಮನ್ನು ಯಾವ ತೊಡರಿನಲ್ಲಿಯೂ ಸಿಕ್ಕಿಸುವದಿಲ್ಲ. ಆದರೆ ಮೀರಾ ಅವರ ವ್ಯಾನಿಟಬ್ಯಾಗ ಸ್ವಲ್ಪ ಕೊಟ್ಟರೆ ನೋಡುತ್ತೇನೆ. ಅಂದೆ, ಅವರು ಒಳಗೆ ಹೋಗಿ ತಂದು ಕೊಟ್ಟರು. ಆಕೆ ಸಾಯುವದಕ್ಕೆ ಒಂದು ತಿಂಗಳ ಮುಂಚೆ. ತುಂಬಾ ಡ್ರೆಸ್ ಮಾಡಿಕೊಂಡು ನನ್ನ ಗೆಳತಿಯ ಹುಟ್ಟು ಹಬ್ಬ ಇದೆ ನಾನು ಸ್ವಲ್ಪ ಲೇಟಾಗಿ ಬರುತ್ತೇನೆ ಅಂತಾ ಹೇಳಿ ಹೋದವಳು ರಾತ್ರಿ ಹನ್ನೊಂದು॥ಗಂಟೆಗೆ ಬಂದ್ಲಂತೆ. ಬಂದಾಗ ಕೊರಳಲ್ಲಿ ಎರಡು ಸಾವಿರ ರೂಪಾಯಿಯ ನೆಕ್‌ಲೆಸ್ ಇರಲಿಲ್ಲವಂತೆ. ತಾಯಿ ಕೇಳಿದಾಗ ನನ್ನ ಸ್ನೇಹಿತೆಯ ತಾಯಿ ಪ್ಯಾಟರ್ನಿಗೆಂದು ಕೇಳಿದರು ಕೊಟ್ಟು ಬಂದಿದ್ದೇನೆ ಇನ್ನು ನಾಲ್ಕೈದು ದಿನದಲ್ಲಿ ಕೊಡುತ್ತಾರೆ ಅಂತಾ ಹೇಳಿ, ಹೋಗಿ ಮಲಗಿಕೊಂಡು ಬಿಟ್ಟಳಂತೆ.

ಹೀಗೇನೇ ಮೇಲಿಂದ ಮೇಲೆ ಲೇಟಾಗಿ ಬರುವದು, ಬಂದಾಗ ಮಂಕಾಗಿರುತ್ತಿದ್ದಳು. ಸದ್ಯ ನೀನು ಈ ಅಪಘಾತದಿಂದ ಪಾರಾದೆಯಲ್ಲಾ ದೇವರು ದೊಡ್ಡವನು ಅಂದದ್ದಕ್ಕೆ ಆವರಿಗೆ ಆಗದವರು ನಿನಗೆ ಏನೇನೋ ಹೇಳಿರಬಹುದು ಅಂದಳು ಶೀಲ. ಹಾಗಾದರೆ ನೋಡು ಶೀಲ ನಿನಗೋಸ್ಕರವೇ. ತಂದೆ ಮೀರಳ ತಾಯಿಯನ್ನು ಬೇಡಿ ನನ್ನ ಮಗಳ ಹಾಗೆ ಬೇರೆ ಹೆಣ್ಣು ಮಗುವಿನ ಜೀವನ ಕೆಡುವದು ಬೇಡಾ ಅಂತಾ ಕೊಟ್ಟರು. ತಾಯಿ ಇದ್ದೂ ನನ್ನ ಮಗಳನ್ನು ಉಳಿಸಿಕೊಳ್ಳಲಾಗಲಿಲ್ಲ ಅಂತಾ ಆ ತಾಯಿ ತುಂಬಾ ದುಖಿಃಸಿದರು, ಓದುತ್ತೆನೆ ಕೇಳು.

ಮೀರಾ.... ನಿನ್ನೆ ನಿನ್ನ ಕಾಗದ ಮುಟ್ಟಿತು. ಏನೋ ನನ್ನ ಚಿಕ್ಕಮ್ಮ ಪ್ಯಾಟರ್ನಿಗೆ ಅಂತ ಕೇಳಿದ್ದಕ್ಕೆ, ಆ ನಿನ್ನ ನೆಕ್‌ಲೆಸ್ ಕಳಿಸಿದ್ದೇ ಇನ್ನೇನು ಬರುವುದಕ್ಕೆ ನಾಲ್ಕಾರು ದಿನ ಆಗಬಹುದು. ನಾನು ಮನಸ್ಸು ಮಾಡಿದರೆ ನಿನಗೆ ಅಂಥ ನೆಕ್‌ಲೆಸ್ ಎಷ್ಟು ಬೇಕು ಹೇಳು. ಏನೋ ಊರಿಂದ ದುಡ್ಡು ತಡವಾಗಿ ಬಂದದ್ದಕ್ಕೆ ನಿನ್ನ ಹತ್ತಿರ ಯಾವಾಗಲೋ ನೂರೊ-ಐವತ್ತೊ ತೆಕ್ಕೊಂಡಿದಕ್ಕೆ ನೀನು ನನ್ನನ್ನು ಏನೋ ಅಂತ ಭಾವಿಸಿಬಿಟ್ಟೆ. ನೀನು ಈ ಒಂದು ತಿಂಗಳಲ್ಲಿ ನೀನು ನನಗೆ ಸಾಲಗಾರಳ ತರಹ ಗಂಟು ಬಿದ್ದಿದ್ದು ನೆನೆಸಿಕೊಂಡರೇ ನನಗೆ ಬೇಜಾರಾಗುತ್ತದೆ. ನಿನಗೆ ಮನುಷ್ಯನ ಬೆಲೆಗಿಂತ ಚಿನ್ನದ ಬೆಲೆ ಜಾಸ್ತಿ ಆಯ್ತು. ಇನ್ನು ಮೇಲೆ ನೀನು ನನಗೆ ಕಾಗದ ಹಾಕಬೇಡ ಸದ್ಯ ನಿನ್ನ ಬಣ್ಣ ಬೇಗನೇ ಬಯಲಾಯ್ತು. ಇನ್ನು ನಿನ್ನ ಪ್ರಕೃತಿಯಲ್ಲಿ ವ್ಯತ್ಯಾಸ ಆಗಿದೆ ಅಂತ ಬರೆದಿರುವಿಯಲ್ಲಾ. ಓದಿದ ಹುಡುಗಿ ನಿನಗೆ ನಾನೇನು ಹೇಳಲಿ. ಅದಕ್ಕೆ ಕಾರಣ ನಾನೊಬ್ಬನೇ ಏನು? ಅಂದ ಹಾಗೆ ಇದು ಮೊದಲನೆಯ ಸಲವೂ ಇರಲಿಕ್ಕಿಲ್ಲವಲ್ಲಾ! ಯಾವದಾದರೂ ಡಾ॥ ಬೆಟ್ಟಿಯಾಗು. ಇನ್ನು ನಿನಗೆ ನಾನು ಕಾಗದವನ್ನು ಹಾಕುವದಿಲ್ಲ- ನನ್ನ ರೂವನ್ನು ಬದಲಾಯಿಸಿದ್ದೇನೆ. ಬಹುಶಃ ಇದು ನನ್ನ ಕೊನೆಯ ಕಾಗದ. ಸಾಕು ನಿನ್ನ ಸಹವಾಸ. ನಾನಿನ್ನು ನಿನ್ನ ಮುಖವನ್ನು ನೋಡಲು ಮನಸಿಲ್ಲ.

—ದೇ. ದಾ.

ಬಹುಶಃ ಇದೇ ಅವನ ಕೊನೆಯ ಕಾಗದ, ಆ ಹುಡುಗಿ ಈ ಕಾಗದ ನೋಡಿಯೇ ಆ ಹೊತ್ತು ಆತ್ಮ ಹತ್ಯೆ ಮಾಡಿಕೊಂಡಿರ ಬೇಕು. ಶೀಲಾ–ಅಮ್ಮನನ್ನು ತಬ್ಬಿಕೊಂಡು ಅಳಲಾರಂಭಿಸಿದಳು.

ಚಿಕ್ಕಮ್ಮ ! ನಿಮ್ಮೆಲ್ಲರನ್ನು ತುಂಬಾ ನೋಯಿಸಿದೆ. ಅವನ ಬಣ್ಣದ ಮಾತಿಗೆ ಮರುಳಾದೆ. ಇನ್ನು ನಿಮ್ಮೆಲ್ಲರ ವಿಶ್ವಾಸಕ್ಕೆ ನಾನು ಅರ್ಹಳಲ್ಲಾ ! ನಾನು ಉಪಕಾರಗೇಡಿ, ನೀಚಳು, ಪಾಪಿ! ಚಿಕ್ಕಮ್ಮಾ! ನಾನೂ ಮೀರಳ ಹಾದಿಯನ್ನೇ ಹಿಡಿಯುತ್ತೇನೆ. ಅತ್ತೆ ಮಾವರಿಗೆ ಯಾವ ಮುಖ ತೋರಿಸಲಿ.

ಶೀಲಾ ಸಮಾಧಾನ ತಂದುಕೊಮ್ಮಾ ! ನೀನು ನಮ್ಮ ಮುಂದೆ ಬೆಳೆದ ಕೂಸು. ನಿನ್ನ ಬಗ್ಗೆ ನಮ್ಮ ಅಭಿಮಾನ ಎಷ್ಟೂ ಕಡಿಮೆ ಆಗಿಲ್ಲ. ನೀನು ಆತ್ಮಹತೆಯ ವಿಚಾರವನ್ನಂತೂ ಮಾಡಬೇಡ. ಆತ್ಮ ಎಂದೂ ಕೆಟ್ಟ ಕೆಲಸವನ್ನು ಮಾಡುವುದಿಲ್ಲ. ಕೆಲವು ಸಲ ಅವಿವೇಕ ಅವಿಚಾರಗಳ ಕೈ ಮೇಲಾದಾಗ ಸ್ವಲ್ಪ ಹಿಂದೆ ನಿಂತಿರುತ್ತೆ. ಅಷ್ಟೇ, ನೀನು ಮೀರಳ ಹಾಗೆ ವಿಷ ಕುಡಿದರೆ ಅವಿವೇಕ ಅವಿಚಾರಗಳು ಸಾಯುತ್ತವೆಯೇ ಹೊರ್‍ತು ಆತ್ಮದ ಹತ್ಯೆಯನ್ನು ಯಾರಿಂದಲೂ ಮಾಡಲು ಸಾಧ್ಯವಿಲ್ಲ. ನಿಮ್ಮ ತಾಯಿಯ ಪೂಜಾಫಲದಿಂದಲೇ ಆ ಕಳ್ಳ ಕಧೀಮನ ಜಾಲದಿಂದ ತಪ್ಪಿಸಿಕೊಂಡಿರುವಿ. ರಜ ಮುಗಿದ ತಕ್ಷಣ ನಿನ್ನನ್ನು ಸುರೇಶನ ಕೊರಳಿಗೆ ಕಟ್ಟಿ ಬಿಡುತ್ತೇವೆ! ಅವನು ನಿನ್ನನ್ನು ಕೊನೆಯವರೆಗೂ ಹೂವಿನ ಹಾಗೆ ನೋಡಿಕೊಳ್ಳುತ್ತಾನೆ. ಸ್ವರ್ಗದಲ್ಲಿರುವ ಆ ನಿನ್ನ ತಂದೆ ತಾಯಿಗಳು ಸಂತೋಷ ಪಡುವಂತೆ ಸಂಸಾರ ಮಾಡು. ಹಾಗೂ ಸೋಮು ಅವನಿಗೂ ಹೇಳಿದ್ದಾನಂತೆ, ಇನ್ನೊಮ್ಮೆ ಅವಳ ತಂಟೆಗೆ ಬರಬೇಡ, ನಮ್ಮ ತಂದೆ ಪೋಲಿಸ್ ಡಿಪಾರ್ಟ್‌ಮೆಂಟಿನವರು, ಶೀಲಾ ಅವರ ಸಾಕುಮಗಳು ಅಂತಾ. ಶೀಲಾ ನೀನು ನಗುನಗುತ್ತಾ ಇರು. ಅಷ್ಟರಲ್ಲಿ ಸದಾ ಬಂದು ಶೀಲಾ ಹೋಗಿ ದೇವರಿಗೆ ನಮಸ್ಕಾರ ಮಾಡಿ ಬಂದು ವೀಣೆ ನುಡಿಸಿ ನಿನ್ನ ಸರಸ್ವತಿ ಅವತಾರ ದರ್ಶನ ಮಾಡಿಸಮ್ಮಾ ಈ ಬಡ ಅಣ್ಣನಿಗೆ ಅಂತಾ ಅವಳನ್ನು ಬಲವಂತದಿಂದ ಮುಖ ತೊಳೆಯಲು ಕಳಿಸಿ ಹಾಲಿನಲ್ಲಿ ತಾನೇ ಹಾಸಿ ವೀಣೆ ತಂದಿಟ್ಟ. ಅವಳು ದೇವರಿಗೆ ನಮಸ್ಕರಿಸಿ ಬಂದು ವೀಣೆಯ ಮೇಲೆ ಬೆರಳಿಟ್ಟ ಕೂಡಲೇ ವೀಣೆಯ ಝೇಂಕಾರ ಮನೆಯನ್ನೆಲ್ಲಾ ಹರಡಿ, ನನ್ನ ಬೆಳಗಿನ ದುಃಸ್ವಪ್ನವನ್ನು ಕಡಿದು ಹಾಕಿತ್ತು. ❀

---

( 15 ನೇ ಪುಟದಿಂದ )

ವೆಂದು ಮೊದಲಾಗಿ ಹೇಳಿರುವನು. ಅವನಿಗೆ ಇವನೂ, ಇವನಿಗೆ ಅವನೂ ಗುರುವಾದದು ಹೇಗೆ ? ಎಂಬುದೂ ಸಮಸ್ಯೆಯೇ. ಇಬ್ಬರೂ ಕಮ್ಮೆ ಕುಲದ ಲಿಂಗಧಾರೀ ಬ್ರಾಹ್ಮಣ ಮತದಲ್ಲಿ ಹುಟ್ಟಿದವರು. ಆಗ ಸಂಸ್ಕರಿಸಲ್ಪಟ್ಟ ವೀರಶೈವ ಮತದವರಿರಲಿಲ್ಲ. ಇವರಿಬ್ಬರೂ ಒಬ್ಬರ ಲಿಂಗವನ್ನು ಇನ್ನೊಬ್ಬರ ಕೈಲಿಟ್ಟು ಪ್ರಾಣ ಪ್ರತಿಷ್ಠೆಯನ್ನು ಮಾಡಿಸಿ, ಮರಳಿ ಪಡೆದು, ಪ್ರಪ್ರಥಮ ವೀರಶೈವರಾದುದರಿಂದ ಇವನಿಗೆ ಅವನು, ಅವನಿಗೆ ಇವನು ಗುರುವಾದರೆಂಬುದು ಈ ಸಮಸ್ಯೆಗೆ ಪರಿಹಾರ.

ಅಲ್ಲಮಪ್ರಭುವು ಅದ್ವೈತ ಪರಮಾವಸ್ಥೆಯನ್ನು ಮುಟ್ಟಿ, ನಿಷ್ಕ್ರಿಯನಾದವನು. ಗೌಡಪಾದರ ವೈತಥ್ಯಪ್ರಕರಣದಲ್ಲಿ ಹೇಳಿದಂತೆ ಅವನು "ನಿಃಸ್ತುತಿರ್ನಿರ್ನಮಸ್ಕಾರಃ" ಎಂದರೆ ಅದರ ಶಾಂಕರಭಾಷ್ಯದಲ್ಲಿ ಹೇಳಿದಂತೆ "ಸ್ತುತಿನಮಸ್ಕಾರಾದಿ ಸರ್ವಕರ್ಮವರ್ಜಿತಃ" ಸ್ತುತಿನಮಸ್ಕಾರಾದಿಗಳಲ್ಲಿ ಯೂದ್ವೈತ ಭಾವನೆಯಿದೆ. ಅವು ಸಹ ಇಲ್ಲದೆ ಆತ್ಮಾನುಸಂಧಾನದಲ್ಲಿ ನಿರತನಾಗಿರುವನು ಪ್ರಭುದೇವ. ಬಸವಣ್ಣನಾದರೂ ಭಕ್ತಿಭಂಡಾರಿ; ಹರಿಹರನು ಹೇಳುವಂತೆ "ಆಡುತಾಡುತಲ್ಲಿ ಪೊಗಳ್ವುದಂನೆರೆಮರೆದು, ನೋಡುನೋಡುತ್ತಲ್ಲಿ ನೋಟಮಂ ನೆರೆ ಮೆರೆದು, ಘನಸುಖದೊಳಿರಡಂತಿರ್ದ" ವನನ್ನ ಬಹುದು. ಚೆನ್ನ ಬಸವೇಶನಾದರೆ, ಮುಂಡಕೋಪನಿಷತ್ತಿನಲ್ಲಿ ಹೇಳಿದಂತೆ "ಆತ್ಮ ಕ್ರೀಡಃ ಆತ್ಮರತಿಃ ಕ್ರಿಯಾವಾನ್ ಬ್ರಹ್ಮವಿದಾ ವರಿಷ್ಠಃ" ಎಂದರೆ, ಆತ್ಮರತಿಯೂ, ಆತ್ಮಕ್ರೀಡನೂ, ಆಗಿದ್ದರೂ ಕ್ರಿಯಾವಾನ್ ಆಗಿ ಬ್ರಹ್ಮವಿದರಲ್ಲಿ ಶ್ರೇಷ್ಠನಾದವನು. 'ಶಿವಯೋಗಪದೈಕ ಸಮಾಪ್ತ'ನಾದರೂ, ವಿಪತ್ಕಾಲದಲ್ಲಿ ಶರಣರ ರಕ್ಷಣೆಗೆ ಶಸ್ತ್ರಗಳನ್ನು ಹಿಡಿದ ನಿಷ್ಕಾಮ ಕರ್ಮಿ. ಬಸವೇಶನು ಸಂಸ್ಕರಿಸಿದ ಮತದ ಪ್ರಸಾರವನ್ನು ಕೈಗೊಂಡು ವಚನಗಳನ್ನಲ್ಲದೆ, ಮತಧರ್ಮವನ್ನು ನಿಷ್ಕರ್ಷಿಸುವ 'ಕರಣದಹಸುಗೆ' ಮಂತ್ರಗೋಪ್ಯ' 'ಮಿಶ್ರಾರ್ಪಣ' ಮೊದಲಾದ ಗ್ರಂಥಗಳನ್ನು ಬರೆದು, ಮತಸಿದ್ಧಾಂತವನ್ನು ನಿಷ್ಕರ್ಷಿಸಿದನು. ಆ ಸಿದ್ಧಾಂತದ ಸೂಕ್ಷ್ಮ ಪರಿಚಯವನ್ನು ಮಾತ್ರ ಇಲ್ಲಿ ಮಾಡಲು ಸಾಧ್ಯ.

(ಮುಂದುವರಿಯುವುದು.)



# ಕಾವ್ಯ ವಾಹಿನಿ

## ನಗುತಲಿರು

—ಅನ್ನದಾನಿ ಹಿರೇಮಠ

ನಗುತಲಿರು
ಹಾಡುತಲಿರು
ಕುಣಿಯುತಲಿರು.
ನಗು !
ವೇಳೆ ಮಿತವಾಗಿದೆ
ಮಳೆಯ ಹನಿಯಂತಿದೆ
ದಾರದೆಳೆಯಂತೆ ತೆಳುವಾಗಿದೆ.
ದೇವ ರಚಿಸಿಹ
ಸ್ವರ್ಗ
ಭೂಮಿ
ಕವಿತೆ ನಿನಗೆಂದು !
ನಗಬೇಕು
ನಗಿಸಬೇಕು
ಬಟ್ಟಲ ನೀಲಾಕಾಶದಲ್ಲಿ
ಸಂತೋಷದಿ ಹಾಡುವ
ಜೋಲಾಡುವ
ಆಕಾಶ ತಾರೆಗಳ
ಜೊತೆ ಸೇರ ಬೇಕು.
ನಗು !
ಯುದ್ಧ ಮಾಡು
ಕಾರ್ಯ ಮಾಡು
ನಿನಗೆಂದು ಸುರಿಸಿದ
ಈ ಸಂತಸ ಜೀವನದ
ದ್ರಾಕ್ಷಾರಸ ಕುಡಿ.
ಪ್ರೀತಿಯ ನಿನ್ನೀ
ಮಾತೃ ಭೂಮಿಯುಲಿ
ಆ ದೇವನ ನೆನೆಯುತ್ತ
ಆನಂದದಿ ದುಡಿ.
ಸುಂದರ ಹೋಟೆಲಿನ
ತುಸುರಸ ನಿಮಿಷಗಳಂತೆ



## ಮನ ಹರಿದತ್ತ

—ದಿಗಂಬರ ಜೋಶಿ

ಮನ ಹರಿದತ್ತ । ಗುರುದೇವದತ್ತ
ಹರಿಯಲಿ ಚಿತ್ತ । ಸಿರಿ ಪಾದದತ್ತ ॥೧॥
ಅನಸೂಯಾ ಸೂನು । ಜಗದೊಳು ತಾನು
ಚರಿಸುವನೇನು । ಭಕ್ತ ಕಾಮಧೇನು ॥೨॥
ಅತ್ರಿಯನಂದನ । ಭವಭಯಭಂಜನ
ಮಾಡುವೆ ವಂದನ । ಹರಿಯುವ ಬಂಧನ ॥೩॥
ನೆನೆಯಲೊ ಜೀವ । ಗೆಲುವೆಯೊ ಸಾವ
ಭಕುತರ ಕಾವ । ಸುಖಶಾಂತಿ-ನೀವ ॥೪॥
ಧೀಪುರದರಸ । ಕೃಷ್ಣಾ ತೀರ ವಾಸ
ನರಹರಿ ವೇಷ । ನೀಡುವೆ ಹರುಷ ॥೫॥
ನಮಿಸಲು ನಿನ್ನ । ಕಳೆಯುವೆ ಬನ್ನ
ನೆನೆಯುವೆ ಚಿನ್ನ । ಹರಸಲೊ ಎನ್ನ ॥೬॥
ದೇಶನೂರ ದತ್ತ । ಪಾಂಡುರಂಗನತ್ತ
ಹಿಡಿಯಲು ಚಿತ್ತ । ಮನವದು ಸ್ವಸ್ತ ॥೭॥
ದಿಗಂಬರ ಜೋಶಿ । ಬೆಳಗಾಮವಾಸಿ
ಮನವನು ಶೋಧಿಸಿ । ಬೇಡುವನು ಸ್ತುತಿಸಿ ॥೮॥
ಗುರುಪಾದ ಭಕ್ತಿ । ನೀಡುವುದು ಶಕ್ತಿ
ಇದಕೇಕೆ ಯುಕ್ತಿ । ಪಡೆಯಲೊ ಮುಕ್ತಿ ॥೯॥

---

ಈ ಜಗತ್ತಿನಲಿ ಎಲ್ಲರೊಡಗೂಡಿ
ಸೋದರರ ರಕ್ತ ಸಂಬಂಧದಂತೆ
ನಗುವು ನಲಿವುಗಳಿಂದ ತುಂಬಿಕೊಂಡಿರು.
ಮಧುರ ಸಂಗೀತ ಮುಗಿಯುವವರೆಗೆ
ಕುಣಿತಕೊನೆಗೊಳ್ಳುವವರೆಗೆ
ಆನಂದ ಸಾಗರದಲಿ ತೇಲುತಿರು.
ಆಟವಾಡುವದಾಗುವವರೆ
ಸಾವು ಸ್ವಾಗತಿಸುವವರೆಗೆ
ಸತತ ಸಂತೋಷದಲ್ಲಿರಿ
ಗೆಳೆಯರೆ ! (ಇಂಗ್ಲೀಷ್ ಕವಿತೆಯಿಂದ)



# ಬಿಳಿಗಿರಿಯ ಮಡಿಲಲ್ಲಿ

—ತ. ಪು. ವೆಂಕಟರಾವ್

"ದೇವನೊಬ್ಬ ನಾಮ ಹಲವು ಎನ್ನುವ ತತ್ವಕ್ಕೆ ಜ್ವಲಂತ ಸಾಕ್ಷಿಯಾಗಿ ನಿಂತ ಹರಿ-ಹರರ ಶಕ್ತಿಗಳ ಸಮ್ಮಿಳನ ಐತಿಹಾಸಿಕ ಕ್ಷೇತ್ರ ಬಿಳಿಗಿರಿ ಬೆಟ್ಟ"

ಈಗಿನ ಬಿಳಿಗಿರಿ ರಂಗನ ಬೆಟ್ಟವನ್ನು ಹಿಂದೆ ಶ್ವೇತಾದ್ರಿ ಎಂದು ಕರೆಯುತ್ತಿದ್ದರು.

ಶ್ವೇತಾದ್ರಿಯನ್ನೊಮ್ಮೆ ನೋಡಿದವರು. ಅಲ್ಲಿಯ ನಿಸರ್ಗ ಸೌಂದರ್ಯವನ್ನು ಮರೆಯಲಾರರು.

ಇಂದ್ರನೀಲ ಮಣಿಯ ಕಾಂತಿಗೆ ಸಮಾನಾಗಿಯೂ, ಸ್ವಲ್ಪ ಭಾಗವು ಸುವರ್ಣವರ್ಣದಿಂದ ಕೂಡಿಯೂ, ಕೆಲ ಭಾಗ ಸ್ಫಟಿಕ ಕಾಂತಿಯಿಂದ ಶೋಭಿಸುತ್ತಲೂ, ಶ್ರೀಗಂಧ, ಅಶೋಕ, ಪುನ್ನಾಗ, ಚಂಪಕ, ಅಶ್ವತ್ಥ, ಮುತ್ತುಗ, ದಾಳಿಂಬ, ತಾಳೆ, ಕೇತಕಿ, ಹಲಸು, ಸಿಹಿಮಾವು, ನೇರಳೆ, ಬಾಳೆ, ಅಡಿಕೆ, ನೆಲ್ಲಿ ಮೊದಲಾದ ವೃಕ್ಷಗಳಿಂದಲೂ, ಬಿದಿರು ಮೆಳೆಗಳಿಂದಲೂ, ನಾನಾ ವಿಧವಾದ ಲತೆಗಳಿಂದಲೂ, ದಿವ್ಯವಾದ ಕಮಲಗಳ ಪರಿಮಳದಿಂದ ಶೋಭಿಸುವ ಕೊಳಗಳಿಂದಲೂ ನಾನಾ ವಿಧವಾದ ಮೃಗ-ಪಕ್ಷಿಗಳಿಗೆ ತಾಣವಾಗಿ ಶೋಭಿಸುತ್ತಿದೆ.

ಇಲ್ಲಿ ನಿಸರ್ಗ ಮಲೆತು ನಿಂತಿದೆ. ಬೆಟ್ಟ ತಾವರೆಯಾಗಿ ಪ್ರಕೃತಿ ನವಯುವತಿಯಾಗಿ, ನಭ ತನ್ನ ಗರ್ಭತಲದ ನಕ್ಷತ್ರ ಮಾಲೆಯನ್ನು ಹಾಕಿ, ಹೊಸ ಪ್ರಪಂಚವನ್ನೇ ಸೃಷ್ಟಿಸಿದೆ.

ಬಿಳಿಗಿರಿಯ ಗರ್ಭದಿಂದ ವಿರಾಜ ನದಿ ಹರಿದು ಕಾವೇರಿ ನದಿಯಲ್ಲಿ ಸಂಗಮಿಸುತ್ತದೆ. ಬೆಟ್ಟದ ತುದಿಯಲ್ಲಿ ನಿಂತು ನೋಡಿದರೆ ಕಾವೇರಿ ಹೂವೇರಿ ಬರುವಂತೆ ಬಿಳಿಗಿರಿಯ ರಮ್ಯತೆಗೆ ತನ್ನ ಲಾಲಿತ್ಯತೆಯನ್ನು ಲೀನಗೊಳಿಸುತ್ತದೆ. ಬಿಳಿಗಿರಿಯ ಅರಣ್ಯ ಗರ್ಭದಲ್ಲಿ ತಮ್ಮ ನಿವಾಸಗಳನ್ನು ಸೃಷ್ಟಿಸಿಕೊಂಡು ಪ್ರಕೃತಿಯ ದತ್ತ ಪುತ್ರರಂತೆ ಕಾಣುವ ಮುಗ್ಧ ಜನಾಂಗ ಸೋಲಿಗರು.

ಸೋಲಿಗರು, ಹಿಂದೂ ಸಂಪ್ರದಾಯಸ್ಥರಾಗಿ ಧೀಮಂತ ನಿಲುವಿನ ಸೋಲರಿಯದ ಜನಾಂಗವಾಗಿದ್ದಾರೆ.

ಬಿಳಿಗಿರಿಯ ಪರಿಸರದಲ್ಲಿ ಹಲವಾರು ದಂತ ಕಥೆಗಳು ಮಾನವ ಕಲ್ಪನೆಯನ್ನು ಮೀರಿ ತಮ್ಮದೇ ಆದ ವೈಖರಿಯಿಂದ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ.

ದಂತ ಕಥೆಗಳು ನಮ್ಮ ನಾಡಿನಲ್ಲಿ ಪ್ರಚಲಿತ ವಿಚಾರಗಳನ್ನು ಸಾರುವ ಜನಪದ ನುಡಿಮುತ್ತುಗಳಾಗಿ ಪೀಳಿಗೆಯಿಂದ ಪೀಳಿಗೆಗೆ ಸಾರಿಬರುವ ಸಾಕ್ಷ ಚಿತ್ರಗಳಾಗಿವೆ. ಇವುಗಳಲ್ಲಿ ಸತ್ಯವಿಲ್ಲವೆಂದರೂ ಸತ್ವಶಾಲಿಯಾದ ಅಗಮ್ಯ, ರಮ್ಯ, ಮನೋಹರ, ಲಾವಣ್ಯ, ಲಾಲಿತ್ಯ ಪೂರ್ಣ ಸಾಹಿತ್ಯ ಲಹರಿ ಹರಿದಿದೆ.

ಇಂತಹ ಸತ್ವ ಪ್ರಭಾವಿತ ಚಿತ್ರಣವನ್ನು ಸೋಲಿಗ ಜನಾಂಗಕ್ಕೆ ಸಂಬಂಧ ಪಟ್ಟಂಥ ಉಲ್ಲೇಖ ಇದೆ.

ಸೋಲಿಗರು ತಮ್ಮ ಜನಾಂಗದ ಕೀರ್ತಿಶೇಷ ಚರಿತ್ರೆಯನ್ನು ಕಗ್ಗದ ರೂಪದಲ್ಲಿ ಈಗಲೂ ಹಾಡುತ್ತಾರೆ.





ಸೋಲಿಗರ ಮೂಲ ಪುರುಷ ನೀಲಯ್ಯ ಅವನ ಪತ್ನಿ ನೇವಸೋಲಿಗಗಿತ್ತಿ.

ಆಕೆ ಶಿವಭಕ್ತಳು. ಬಹು ಕಾಲ ಮಕ್ಕಳಿಲ್ಲದೆ ಬಂಜೆಯೆಂಬ ಕಳಂಕವನ್ನು ಹೊತ್ತು ದುಃಖಾತೀತಳಾಗಿ ತನ್ನ ಗುರು ಮಹದೇಶನನ್ನು ಈ ರೀತಿ ನೆನೆಯುತ್ತಾಳೆ.

ಗುರುವೇ ನನಗಿಲ್ಲ ಮಕ್ಕಳ ಭಾಗ್ಯ
ಸಾಕಯ್ಯ ನನಗೆ ಈ ಸಂಸಾರದ ಭೋಗ
ಶರಣು ಶರಣೆಂಬೆ ಮಹದೇಶನೇಗೆ
ನನ್ನ ಗುರು ಮಲ್ಲೇಶಗೆ ॥೧॥

ಕೇಳಿದ ವರಗಳ ನೀಡುವ ಧಾತ
ಆತ್ಮ ಲಿಂಗವನೆ ನೀಡಿದ ವಿಖ್ಯಾತ
ಶರಣು........ಶರಣೆಂಬೆ ॥೨॥

ಗಂಗೆಯ ತಲೆಯಲಿ, ಚಂದ್ರನ ಮುಡಿಯಲಿ
ಸರ್ಪನ ಕೊರಳಲ್ಲಿ ಮುಡಿದಹ ನಾಥ
ಶರಣು ॥೩॥

ತುಂಬಯ್ಯ ನನ್ನ ಒಡಲಲ್ಲಿ ಸಂತಾನ
ಬೆಳಸಯ್ಯ ನನ್ನ ಕುಲದ ಮನೆತಾನ
ಶರಣು ॥೪॥

ಈ ಪರಿಯಿಂದ ಆಕೆ ತನ್ನ ಗುರುಮಹದೇಶನನ್ನು ಆತ್ಮ ಪೂರ್ವಕವಾಗಿ ಭಕ್ತಮನೋರಥಳಾಗಿ ಬೇಡುತ್ತಾಳೆ.

ಅವಳ ಬೇಡಿಕೆ ಶಿವನಿಗೆ ಮುಟ್ಟಿತೋ ಏನೋ ಗುರುಮಲ್ಲೇಶ ಜಂಗಮ ರೂಪದಲ್ಲಿ ಬಂದು ಆಕೆಗೆ ವರ ನೀಡುತ್ತಾನೆ. ಆಕೆಯ ಪವಿತ್ರ ಗರ್ಭದಲ್ಲಿ ಅವಳಿ ಮಕ್ಕಳು ಜನಿಸುತ್ತಾರೆ.

ಕಾರಯ್ಯ ಬಿಲ್ಲಯ್ಯ ಈರ್ವರು ಮಕ್ಕಳು ನಂದಿ ಷಣ್ಮುಖರಂತೆ ವಿರಾಜಮಾನರಾಗಿ ಬೆಳೆಯುತ್ತಾರೆ.

ಸೋಲಿಗರು ಈಗಲೂ ತಾವು ಕಾರಯ್ಯ ಬಿಲ್ಲಯ್ಯನ ಮಕ್ಕಳೆಂದು ಹೇಳಿಕೊಳ್ಳುತ್ತಾರೆ.

ಕಾರಯ್ಯನ ಮಕ್ಕಳು ವೈಷ್ಣವ ಪಂಥದವರು
ಬಿಲ್ಲಯ್ಯನ ಮಕ್ಕಳು ಶೈವ ಪಂಥದವರು.

ಈಗಲೂ ಬಿಳಿಗಿರಿ ಮತ್ತು ಮಹದೇಶ ಬೆಟ್ಟಗಳಲ್ಲಿ ಕಾರಯ್ಯ ಬಿಲ್ಲಯ್ಯನ ಮಕ್ಕಳನ್ನು ಕಾಣಬಹುದು.

ಅವರು ಕಾಡಿನಲ್ಲಿ ಗೆಡ್ಡೆ ಗೆಣಸು ಜೇನು ಇತ್ಯಾದಿಗಳನ್ನು ಕಿತ್ತು ಮಾರಿ ಜೀವನ ಸಾಗಿಸುತ್ತಿದ್ದಾರೆ. ಈಗೀಗ ಕೃಷಿಯನ್ನು ಕೈಗೊಂಡಿದ್ದಾರೆ.

ಅವರಲ್ಲಿ ಬೆಳ್ಳಿ ಕುಲ, ಚಳಿ ಕುಲ, ಹಾಲು ಕುಲ, ತೆನೆ ಕುಲ, ಸೂರ ಕುಲ ಎಂಬ ಐದು ಪಂಗಡಗಳಿವೆ. ಅವರಲ್ಲಿ ಯಜಮಾನ, ಚಲುವಾದ ಕೋಲುಗಾರ ಎಂಬ ಕುಲತಿಲಕರಿದ್ದಾರೆ. ಈ ಮೂವರಿಗೂ ಜನಾಂಗದಲ್ಲಿ ವಂಶಪಾರಂಪರ್ಯ ಅಗ್ರಸ್ಥಾನ ಕಾದಿರಿಸಿದೆ.

ಸೋಲಿಗರು ಬಿಳಿಗಿರಿ ರಂಗನನ್ನು ಭಾವ ರಂಗಯ್ಯ ಎಂದು ಕರೆದುಕೊಳ್ಳುತ್ತಾರೆ.

ಇದಕ್ಕೊಂದು ದಂತಕಥೆಯನ್ನು ಅವರು ಕಟ್ಟಿ ಹಾಡುತ್ತಾರೆ.

ಕಗ್ಗ-

ಶ್ವೇತ ಗಿರಿಯ ಮೇಲೆ ಕುಳಿತಿಹ ರಂಗಯ್ಯ
ಒಲಿದು ಬಾರಯ್ಯ ನನ ಬಕುತೀಗೆ
ಇಂದು ಕೇಳ್ಯೇಳು ಬೊಮ್ಮೆಗೌಡನ ಕುವರಿ ಪುಷ್ಪಮಾಲೆ
ಚಂದುಳ್ಳೆ ಚೆಲುವ ಬೀರುವ ಲಾವಣ್ಯ ಮೇಲೆ ॥೧॥

ನಿನ್ನ ಬಿಟ್ಟು ಬ್ಯಾರಾರನು ಕರಿಸೇನು
ನೀನಲ್ಲದೆ ಮತ್ತೊಬ್ಬರ ನೆನೆಯೇನು
ಕರುಣೆ ತೋರಯ್ಯ ಕುವರೀಗೆ
ಬಾಚಾಲೆಯ ಕೂಗು ರಂಗಯ್ಯಗೆ ಮುಟ್ಟೀತು ॥೨॥

ಬಂದಾನು ರಂಗಯ್ಯ ದಾಸಯ್ಯನಾಗಿ
ಅದಾನು ಪುಷ್ಪ ಮಾಲೆಯ ಮನಕೆ ಅನುರಾಗಿ
ಕೊಂಡೊಯ್ದ ಬಿಳಿಗಿರಿಗೆ ಪುಷ್ಪ ಮಾಲೆ
ಹಾಕ್ಯಾಳು ರಂಗಯ್ಯಗೆ ಅಂತರದ ಮಾಲೆ ॥೩॥

ಸೋಲಿಗರ ಬೊಮ್ಮೇಗೌಡ ಕುಲದಲ್ಲಿ ಕೋಲುಗಾರ. ಅವನು ನೂರು ಮನೆಗಳ ಒಡೆಯ.

ಅವನಿಗೆ ಚಿಕ್ಕಕಾಡಿ, ದೊಡ್ಡಕಾಡಿ, ಗುಂಗುರತಲೆ, ಮರಬೊಮ್ಮ, ಪುಷ್ಪಮಾಲೆ ಎಂಬ ಐವರು ಕುವರಿಯರು.

ಪುಷ್ಪಮಾಲೆಯೇ ಕಿರಿಯ ಕುವರಿ. ಆಕೆ ವನದೇವತೆಯಂತೆ ಅಪೂರ್ವ ಸುಂದರಿಯಾಗಿದ್ದಳು.

ಸದಾ ಬೆಳದಿಂಗಳನ್ನು ಸೂಸುವ ತಿಳಿನಗೆ
ಕೆಂದಾವರೆಯನ್ನು ಹೋಲುವ ಮುಖ ಮಂಡಲ
ಪ್ರೇಮ ತರಂಗವನ್ನು ತೀಡುವ ಕಂಗಳು
ಶಿಲಾಬಾಲಿಕೆಯಂತೆ ಕಾಣುವ ಲಾವಣ್ಯ ಲಹರಿ
ಮುಗ್ಧ ವಾತ್ಸಲ್ಯವನ್ನು ಬಿಂಬಿಸು ಮೋಹಕ ನೋಟ.

ಆಕೆ ನುಡಿದರೆ ಮಲೆಯಲ್ಲಿ ಮಂದಾನಿಲ ತೀಡಿದಂತಾಗುತಿತ್ತು, ನಕ್ಕರೆ ಕೊಳದಲ್ಲಿ ತಾವರೆ ಅರಳಿದಂತಾಗುತಿತ್ತು, ನಡೆದರೆ ಮಯೂರಿಯ ನೆನಪು ತರುತಿತ್ತು.

ಇಂತು ಆಕೆ ಮತಿಗಳಲ್ಲಿ ಮಾನಿನಿಯಾಗಿ ಕಾಡಿನಲ್ಲಿ ವನರಾಜ್ಞಿಯಾಗಿ, ಜೇನಿನಲ್ಲಿ ಮಧುವಾಗಿ ಲತೆಗಳ ಲಾವಣ್ಯವನ್ನು ಮುಡಿದು ರಾರಾಜಿಸುತ್ತಿದ್ದಳು ಸೋಲಿಗರ ಕುಲದಲ್ಲಿ.

ಆಕೆ ರಂಗನಭಕ್ತೆ, ರಂಗನೇ ತನ್ನ ಪತಿಯೆಂದು ಮಾನವ ಪ್ರಪಂಚದಿಂದ ಮುಕ್ತಳಾದವಳಂತೆ ಸದಾ ಅವನ ಧ್ಯಾನದಲ್ಲಿಯೇ ಕಾಲ ಕಳೆಯುತ್ತಿದ್ದಳು.

ಜನತೆ ಇದು ವಿಚಿತ್ರವೆಂದರು. ಈಕೆಗೆಲ್ಲೋ ಭ್ರಮೆಯೆಂದರಿತರು.

ಆದರೂ ಆಕೆ ರಂಗನನ್ನು ಮರೆಯಲಿಲ್ಲ ಅನ್ನ ನೀರುಗಳನ್ನು ಸಹ ತ್ಯಜಿಸಿ ರಂಗಯ್ಯನಲ್ಲಿ ಅನುರಕ್ತಳಾಗಿ ಕೃಷ್ಣನನ್ನು ಧ್ಯಾನಿಸುವ ರುಕ್ಮಿಣಿಯಂತೆ ಕುಳಿತಳು.

ಅಂದು ಶ್ರಾವಣ ಮಾಸದ ಕೊನೆಯ ರಾತ್ರಿ !

ರಂಗಯ್ಯನಿಗೆ ಪುಷ್ಪಮಾಲೆಯ ಕೂಗು ಮುಟ್ಟಿತೋ ಏನೋ ?

ರಂಗಯ್ಯ ದಾಸಯ್ಯನ ವೇಷದಲ್ಲಿ ಬಾಗಿಲಿಗೆ ಬಂದು ಶಂಖನಾದಗೈದನು.

ಪುಷ್ಪಮಾಲೆ ಎಚ್ಚೆತ್ತು ಕಣ್ಣು ಬಿಟ್ಟು ನೋಡಿದಳು. ಶಂಖಚಕ್ರಧಾರಿಯಾದ ರಂಗನೇ ಅವಳೆದುರು ಪ್ರತ್ಯಕ್ಷನಾಗಿ ನಿಂತಂತೆ ಕಂಡಿತು.

ಆಕೆ ಧಾವಿಸಿ ಬಂದು ರಂಗಯ್ಯನ ಪಾದಗಳ ಮೇಲೆ ಉರುಳಿ

"ಬಂದೆಯಾ ನನ್ನ ಸ್ವಾಮಿ.... ರಂಗಯ್ಯ ನೀನು ಬರಲಿಲ್ಲವೆಂದು ಹಗಲಿರಳು ನಿನಗಾಗಿ ಹಂಬಲಿಸಿ ಕಾದು ಹಣ್ಣಾದೆ, ಸಾಕಯ್ಯ ಈ ಹೆಣ್ಣು ಬವಣೆ ಕೊಂಡೊಯ್ಯೋ.... ನಿನ್ನ ಪೀಠಕೆ"

ಅವನ ಪಾದಗಳ ಮೇಲೆ ಕಣ್ಣೀರು ಕರೆದಿದ್ದಳು.

ಎಲ್ಲರೂ ನೋಡುವಂತೆ ಮಿಂಚಿನ ವೇಗದಲ್ಲಿ ಕೌತುಕ ನಡೆದುಹೋಗಿತ್ತು.

ದಾಸಯ್ಯನ ರೂಪದ ರಂಗಯ್ಯನಾಗಲಿ ಪುಷ್ಪಮಾಲೆಯಾಗಲಿ ಅಲ್ಲಿರಲಿಲ್ಲ. ರಂಗ ತನ್ನ ಪಾದ ತಲದಲ್ಲಿ ಆಕೆಯನ್ನು ಐಕ್ಯಗೊಳಿಸಿ ಕೊಂಡಿದ್ದರು.

ಸೋಲಿಗರು ಬಿಳಿಗಿರಿಯನೇರಿ ರಂಗನಲ್ಲಿ ತೆರವನ್ನು ಕೇಳಿ ಕಾಡಿದರು. ರಂಗಯ್ಯ ಅವರಿಗೆ ಹನ್ನೆರಡುವರೆ ಹಣತೆರವನ್ನು ಕೊಟ್ಟು ಕನ್ಯಾಶುಲ್ಕದಿಂದ ವಿಮುಕ್ತನಾಗದ್ದ.

ಪ್ರತಿ ಶ್ರಾವಣಮಾಸದ ಪ್ರಥಮ ದಿನ ಮೊದಲ ಪೂಜೆ ಸಲ್ಲುವಂತೆ ಸೋಲಿಗರಿಗೆ ಅಭಯವಿತ್ತು ಅವರಗೆ ಭಾವ ರಂಗಯ್ಯನಾದ.

ಈಗಲೂ ಸೋಲಿಗರ ಪ್ರಥಮ ಪೂಜೆ ರಂಗಯ್ಯನಿಗೆ ತಪ್ಪದೆ ನಡೆಯುತ್ತಿದೆ.

ಸೋಲಿಗರು ಮಹದೇಶನನ್ನು ತಮ್ಮ ಗುರುವೆಂದು ಬಿಳಿಗಿರಿ ರಂಗನನ್ನು ಭಾವನೆಂದು ಕರೆಯುವ ವಾಡಿಕೆ.

ಈ ದಂತಕತೆಗೆ ಯಾವ ರೀತಿಯ ಆಧಾರವಿದೆಯೋ ಇಲ್ಲವೋ ? ಅಂತೂ ಜನತೆಯಲ್ಲಿ ಪ್ರಚಲಿತವಾಗಿ ಸತ್ಯ ಕಥೆಯಾಗಿ ಮಾತ್ರ ಹರಿದು ಬಂದಿದೆ.

ಈಗಲೂ ಸೋಲಿಗರನ್ನು ಬಿಳಿಗಿರಿ ಮತ್ತು ಮಹದೇಶನ ಬೆಟ್ಟದಲ್ಲಿ ಹೆಚ್ಚಾಗಿ ಕಾಣಬಹುದು. ಆದಿವಾಸಿ ಜನಾಂಗವೆನಿಸಿ ದೈವಭಕ್ತರಾಗಿ ಪ್ರಕೃತಿಯ ದತ್ತ ಪುತ್ರರಾಗಿ ಬೆಳೆದ ಜನಾಂಗವಾಗಿದ್ದಾರೆ.

(25 ನೇ ಪುಟ ನೋಡಿ)



# ಸಾಕಿದವರನ್ನು ಸಾಕಿದವನು

—ಹೆಚ್. ದೇವಿರಪ್ಪ ಎಂ. ಎ.

ಹೆಚ್. ದೇವಿರಪ್ಪ ಹೆಸರು ಕನ್ನಡ ಸಾಹಿತ್ಯದಲ್ಲಿ ಬಹು ದೊಡ್ಡ ಹೆಸರು. ಹರಿಹರ ಮಹಾಕವಿಯ ಬಗ್ಗೆ ಮಾತನಾಡುವ, ಬರೆಯುವ ಕೆಲವೇ ಜನ ವಿದ್ವಾಂಸರಲ್ಲಿ ಇವರೊಬ್ಬರು. ಇವರು ಬರೆದ 'ಶರಣ ಚರಿತಮಾನಸ' ಹರಿಹರನ ರಗಳೆಗಳ ಬಗ್ಗೆಗೊಂದು ಮೈಲುಗಲ್ಲು. ಇವರು ನಾಟಕ, ಪುರಾಣ, ಕಥೆ, ಕಾದಂಬರಿ, ವಿಮರ್ಶೆ ಎಲ್ಲ ಹಂತಗಳಲ್ಲೂ ಸೇವೆ ಮಾಡಿದ್ದಾರೆ. ಬುದ್ಧ ಜಾತಕ ಕಥೆಯಿಂದ ಆರಿಸಿದ ಈ ಕಥೆ ಮಕ್ಕಳಿಗಾಗಿ ಬರೆದ ಅವರ ಒಂದು ಕಿರು ಕಥೆ. ರಾಮಾಯಣದ ದಶರಥನ ಇದೇ ಮಾದರಿಯ ಕಥೆಯನ್ನು ಇಲ್ಲಿ ಜ್ಞಾಪಿಸಿ ಕೊಳ್ಳಬಹುದು. ಬೌದ್ಧರಿಂದ ಈ ಕಥೆ ಬೆಳೆದು ರಾಮಾಯಣಕ್ಕೆ ಬಂದಿತೋ ಅಥವಾ ಬೌದ್ಧ ಕಥೆ ರಾಮಾಯಣಕ್ಕೆ ಬಂದಿತೋ ವಿಚಾರಿಸುವ ಅಂಶ.

ನಾಗರ ಖಂಡದ ಅರಣ್ಯದಲ್ಲಿ ಬೇಡರಹಳ್ಳಿ ಎಂಬ ಊರು ಇದ್ದಿತು. ಆ ಊರಿನಲ್ಲಿ ನಾಗಮಯ್ಯ ಜಕ್ಕಿಯಬ್ಬೆ ಎಂಬ ದಂಪತಿಗಳಿದ್ದರು. ಅವರು ಗುಣಶಾಲಿಗಳೂ ದೈವಭಕ್ತರೂ ಆಗಿದ್ದರು.

ಈ ಬೇಡ ಬೇಡತಿಯರಿಬ್ಬರೂ ಬೇಟೆಯಾಡುತ್ತ ಅಡವಿಯಲ್ಲೆಲ್ಲ ಸಂಚರಿಸುತ್ತಿದ್ದರು. ಅರಣ್ಯದಲ್ಲಿರುವ ಗೆಡ್ಡೆ ಗೆಣಸು ಹಣ್ಣುಹಂಪಲಗಳನ್ನು ತಿಂದು ಜೀವಿಸುತ್ತಿದ್ದ ಸಾಧು ಪ್ರಾಣಿಗಳನ್ನು ಅವರು ಕೊಲ್ಲುತ್ತಿರಲಿಲ್ಲ. ಐದು ಉಗುರುಗಳುಳ್ಳ ಕ್ರೂರ ಮೃಗಗಳನ್ನು ಮಾತ್ರ ಬೇಟೆಯಾಡುತ್ತಿದ್ದರು. ಅವರಿಬ್ಬರು ಯಾವಾಗಲೂ ಜೊತೆಯಲ್ಲಿಯೇ ಇರುತ್ತಿದ್ದರು. ತುಂಬ ಸುಖ ಸಂತೋಷಗಳಿಂದ ಜೀವಿಸುತ್ತಿದ್ದರು. ಆದರೆ ತಮಗೆ ಮಕ್ಕಳಾಗಲಿಲ್ಲವಲ್ಲಾ ಎಂಬ ಕೊರಗು ಅವರನ್ನು ಆಗಾಗ ಬಾದಿಸುತ್ತಿದ್ದಿತು.

ಒಂದು ದಿನ ಇವರು ಬೇಟೆಯನ್ನು ಹುಡುಕುತ್ತ ಬಹುದೂರ ಸಾಗಿದ್ದರು. ನಾಗಮಯ್ಯ ಮುಂದೆ ಅವನ ಬೆನ್ನಿನಲ್ಲಿಯೇ ಜಕ್ಕಿಯಬ್ಬೆ ನಡೆದಿದ್ದರು. ಹತ್ತಿರದಲ್ಲಿಯೇ ಒಂದು ಮಗುವಿನ ಅಳುವು ಜಕ್ಕಿಯಬ್ಬೆಯ ಕಿವಿಗೆ ಬಿದ್ದಿತು. ಆಕೆ ಗಕ್ಕನೇ ನಿಂತಳು. ಮೈಯೆಲ್ಲ ಕಿವಿಯಾಗಿ ಆಲಿಸಿದಳು. ನಾಗಮಯ್ಯನಿಗೆ ಸಂಜ್ಞೆ ಮಾಡಿ ಹಿಂದಕ್ಕೆ ಕರೆದಳು. ಇಬ್ಬರೂ ಆ ದನಿಯು ಬರುವ ದಿಕ್ಕಿನ ಕಡೆಗೇ ನಡೆದರು.

ಒಂದು ಚೆಲುವಾದ ಗಂಡು ಮಗುವು ಹೊಂಗೆ ಎಲೆಗಳ ಹಾಸಿಗೆಯ ಮೇಲೆ ಮಲಗಿದ್ದಿತು. ಇವರು ಅತ್ತ ಇತ್ತ ಸುತ್ತಲೂ ನೋಡಿದರು. ಯಾರೂ ಇದ್ದಂತೆ ಕಾಣಿಸಲಿಲ್ಲ. ಕೂಗಿ ಕರೆದು ನೋಡಿದರು, ಯಾವ ತಾಯಿಯೂ ಬರಲಿಲ್ಲ. ಜಕ್ಕಿಯಬ್ಬೆ ಮಗುವನ್ನು ಎತ್ತಿಕೊಂಡಳು. ತಾನೇ ಮಗುವನ್ನು ಹಡೆದವಳೋ ಎಂಬಂತೆ ಹಿಗ್ಗಿದಳು. ಮಗುವನ್ನು ಎತ್ತಿಕೊಂಡಿದ್ದ ಮಡದಿಯನ್ನು ನೋಡುತ್ತಾ ನಾಗಯ್ಯನೂ ಹಿಗ್ಗಿನ ಹೊಳೆಯಲ್ಲಿ ಈಜಾಡುತ್ತಿದ್ದನು. ಇಬ್ಬರೂ ಬನದವ್ವನೇ ತಮಗೆ ಮಗುವನ್ನು ಕೊಟ್ಟಳೆಂದು ನಂಬಿದರು. ಮಗುವಿಗೆ 'ಬನವ' ಎಂದು ಹೆಸರಿಟ್ಟರು.

ಜಕ್ಕವ್ವೆಯು ಮಗುವನ್ನು ಸಾಕಲು ಯಾವಾಗಲೂ ಮನೆಯಲ್ಲಿಯೇ ಇರಬೇಕಾಯಿತು. ನಾಗಮಯ್ಯನು ಹೆಂಡತಿಯನ್ನು ಬಿಟ್ಟು ಎಂದೂ ಬೇಟೆಗೆ ಹೋದವನಲ್ಲ. "ನಿನ್ನನ್ನಗಲಿ ಆಡುವ ಬೇಟೆಯಾಟದಿಂದ ನನಗೇನು ಸುಖ ? ನೀನಾದರೂ ಒಬ್ಬಳೇ ಮನೆಯಲ್ಲಿರಬೇಕು. ಈಗ ನಮಗೆ ಅಡವಿಯಲ್ಲಿ ದೊರೆಯುವ ಹಣ್ಣುಹಂಪಲು

ಗೆಡ್ಡೆ ಗೆಣಸುಗಳೇ ಸಾಕು. ಇಂದಿನಿಂದ ನಾನು ನೀನು ಇಬ್ಬರೂ ಸಸ್ಯಾಹಾರದಿಂದ ಜೀವಿಸೋಣ" ಎಂದನು. ಮಗುವಿಗೆ ಅಡವಿಯಲ್ಲಿ ದೊರೆಯುವ ಹಣ್ಣುಗಳ ರಸವೇ ಆಹಾರವಾಯಿತು. ಅವರು ಯಾವಾಗಲೂ ಬನದವ್ವನನ್ನು ಪೂಜಿಸುತ್ತಾ ಧ್ಯಾನಿಸುತ್ತಾ ಕಾಲಕಳೆಯುತ್ತಿದ್ದರು. ಬನವ ಬೆಳೆದು ದೊಡ್ಡವನಾದನು. ಚಿಕ್ಕಂದಿನಿಂದಲೂ ತಾಯಿತಂದೆಗಳಿಗೆ ಬಹಳ ವಿಧೇಯನಾಗಿದ್ದನು. ಅವರು ಹೇಳಿದ ಕೆಲಸವನ್ನು ಬಹು ಶ್ರದ್ಧೆಯಿಂದ ಮಾಡುತ್ತಿದ್ದನು.

ಹೀಗಿರುತ್ತಿರಲು ನಾಗಯ್ಯನು ಜಕ್ಕಯಬ್ಬೆಯರಿಗೆ ಮುಪ್ಪು ಬಂದಿತು. ಅವರ ಕೈಕಾಲುಗಳ ಶಕ್ತಿ ಕುಂದಿ ಹೋಯಿತು. ಕಣ್ಣುಗಳು ಕುರುಡಾದವು ಬನಮಯ್ಯನು ಯಾವಾಗಲೂ ಅವರ ಬಳಿಯಲ್ಲಿಯೇ ಇರಬೇಕಾಗಿದ್ದಿತು. ಅಡವಿಗೆ ಹೋಗಿ ಗೆಡ್ಡೆಗೆಣಸುಗಳನ್ನು ಅಲ್ಲಿ ದೊರೆಯುವ ಹಣ್ಣುಗಳನ್ನು ತಂದು ಅವರಿಗೆ ತಿನ್ನಿಸುತ್ತಿದ್ದನು. ಎಲ್ಲಾ ಸೇವೆಯನ್ನು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದನು.

ಒಂದು ದಿನ ಬನವನು ನೀರು ತರಲು ಸಮೀಪದಲ್ಲಿದ್ದ ಒಂದು ನದಿಗೆ ಹೋದನು. ಅದೇ ಸಮಯದಲ್ಲಿ ನಾಗರ ಖಂಡದ ಅರಸನು ಬೇಟೆಯಾಡುತ್ತ ಈತನಿದ್ದ ಸ್ಥಳದ ಸಮೀಪಕ್ಕೆ ಬಂದನು. ಬನವನು ಗಡಿಗೆಗೆ ನೀರು ತುಂಬಿಕೊಳ್ಳುತ್ತಿದ್ದ ಸದ್ದು ಅವನಿಗೆ ಕೇಳಿಸಿತು. ಆ ಶಬ್ದದಿಂದ ಜಿಂಕೆಯು ನದಿಗಿಳಿದು ನೀರು ಕುಡಿಯುತ್ತಿರುವುದೆಂದು ಊಹಿಸಿಕೊಂಡು ಬನವಯ್ಯನಿಗೆ ಗುರಿಯಿಟ್ಟು ಬಾಣವೆಸೆದನು. ಆ ಬಾಣದ ತುದಿಯು ವಿಷದ ಲೇಪವನ್ನುಳ್ಳದ್ದಾಗಿದ್ದಿತು. ಅದು ಬನಮಯ್ಯನ ಎದೆಗೆ ನಟ್ಟು ಬಿಟ್ಟದ್ದಿತು. ಅವನು ಹಾ ! ಅಯ್ಯೋ ! ಎಂದು ಒರಲುತ್ತ ನದಿಯ ದಂಡೆಯ ಮೇಲೆ ಬಿದ್ದು ಒದ್ದಾಡುತ್ತಿದ್ದನು.

ಅರಸನಿಗೆ ಆಗ, 'ತಾನು ಹೊಡೆದುದು ಜಿಂಕೆಯನ್ನಲ್ಲ ಮನುಷ್ಯನನ್ನು' ಎಂಬುದು ಅರಿವಾಯಿತು. ಕೂಡಲೇ ಬೆಚ್ಚಿಬಿದ್ದನು. ಬಾಲಕನು ಬಿದ್ದಿದ್ದ ಸ್ಥಳಕ್ಕೆ ಒಂದೇ ಉಸಿರಿಗೆ ಓಡಿಬಂದನು.

ಬನವನು "ಅಪ್ಪಾ, ಅಮ್ಮಾ ನಿಮ್ಮನ್ನು ನೋಡಿಕೊಳ್ಳುವರು ಯಾರು? ನನ್ನನ್ನು ಯಾರೋ ಕೊಂದು ಹಾಕಿದರು. 'ಮಗನು ನೀರು ತರಲು ಹೋಗಿರುವನು, ಈಗ ಬರುತ್ತಾನೆ, ಆಗ ಬರುತ್ತಾನೆ' ಎಂದು ನನ್ನನ್ನು ನೀವು ಎದುರು ನೋಡುತ್ತೀರಿ ಅಲ್ಲವೇ? ನಿಮಗೆ ನನ್ನ ಸಮಾಚಾರವನ್ನು ಮುಟ್ಟಿಸುವವರು ಯಾರು'' ಎಂದು ಪರಿಪರಿಯಾಗಿ ಗೋಳಿಡುತ್ತ ಬಾಣದ ನೋವನ್ನು ಸಹಿಸಲಾರದವನಾಗಿ ಅಳಲುತ್ತ ಅಳುತ್ತಿದ್ದನು. 'ಮಗು ನಿನ್ನನ್ನು ಕೊಂದ ಪಾಪಿಯು ನಾನೆ' ಎಂದು ಅರಸನು ತೊದಲಿದನು. ಅವನನ್ನು ಸಂತೈಸಲು ಪ್ರಯತ್ನಪಟ್ಟನು.

ಆಗ ಬನವನು ''ನನ್ನ ಸಾವಿಗೆ ನಾನು ವ್ಯಥೆಪಡುವುದಿಲ್ಲ. ಬಹು ವೃದ್ಧರೂ ಅಂಧರೂ ಆಗಿರುವ ನನ್ನ ತಾಯಿತಂದೆಗಳನ್ನು ಕಾಪಾಡುವವರು ಯಾರು ? ಅವರಿಗೆ ಇನ್ನು ಯಾರು ದಿಕ್ಕು" ಎಂದು ಗೋಳಾಡಿದನು. ಅವನ ದುಃಖ ಮಾತಿಗೆ ಮೀರಿದುದಾಗಿದ್ದಿತು, ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯುತ್ತಿದ್ದಿತು, ಕಂಠದ ಸೆರೆ ಬಿಗಿದುಕೊಂಡಿದ್ದುವು. ಕುತ್ತುಸಿರು ಬಿಡುತ್ತಿದ್ದ. ರಾಜನು 'ಆಯಿತು ನಾನು ಮಾಡಿದ ಈ ನರಹತ್ಯೆಗೆ ಅದಾವ ಶಿಕ್ಷೆ ಕಾದಿದೆಯೋ' ಎನ್ನುತ್ತಿದ್ದಂತೆಯೇ ಬನವನು "ತಾಯಿ ಬನಶಂಕರಿ, ಬನಶಂಕರಿ, ನನ್ನ ತಾಯಿ ತಂದೆಗಳಿಗೆ ಇನ್ನಾರು ದಿಕ್ಕು ಈ ಬನವನೂ ಸತ್ತ ಮೇಲೆ ಇನ್ನಾರು ದಿಕ್ಕು ? ಅವರನ್ನು ಯಾರು ಹೇಗೆ ಸಂತೈಸಬೇಕು' ಎಂದು ಕೊರಗಿದನು.

ಆಗ ರಾಜನು, ಬನವ, ನಾನು ಇಂದಿನಿಂದಲೇ ಈ ಗಳಿಗೆಯಿಂದಲೇ ರಾಜನಲ್ಲ. ರಾಜ್ಯದ ಸಿಂಹಾಸನ, ಅಧಿಕಾರ ಐಶ್ವರ್ಯ ಯಾವುವೂ ನನ್ನವಲ್ಲ. ನಾನು ಇಂದಿನಿಂದ ನೀನು ಹೇಗೆ ನಿನ್ನ ತಾಯಿತಂದೆಗಳನ್ನು ಕಾಪಾಡುತಿದ್ದೆಯೋ ಹಾಗೆಯೇ ಅವರನ್ನು ನಾ ಕಾಪಾಡುತ್ತೇನೆ. ನೀನು ಈ ಪಾಪಿಯ ಬಾಣಕ್ಕೆ ಗುರಿಯಾಗಿ ಅಸುನೀಗಿರುವನು ಎಂಬುದರ ಸುಳಿವು ಕೊಂಚವೂ ಸಿಗದಂತೆ ಅವರಸೇವೆಯನ್ನು ನಾನು ಮಾಡುತ್ತೇನೆ. ಅವರು ಕುರುಡರು ನಾನು ಬನವನೆಂದೇ ಅವರು ತಿಳಿಯುವರು. ನಾನು ಈಗ ಬನವ.

ಬನವ–"ಅದು ಮೋಸವಲ್ಲವೇ ಮಹಾರಾಜ. ಬನವನು ನಾಗಮಯ್ಯ ಜಕ್ಕಿಯಬ್ಬೆಯರ ವರಪುತ್ರ. ಬನಶಂಕರಿಯೇ ನನ್ನನ್ನು ಅವರಿಗೆ ಒಪ್ಪಿಸಿದಳು. ನಾನು ನನ್ನ ತಾಯಿತಂದೆಯವರಿಗೆ ಯಾವ ಸಮಯದಲ್ಲಿ ಏನು ಸೇವೆ ಮಾಡಬೇಕೆಂಬುದನ್ನು ತಿಳಿದಿದ್ದೆ. ಅದನ್ನು ನೀನು ಹೇಗೆ ತಿಳಿದು ಕೊಳ್ಳಬಲ್ಲೆ. ನನ್ನ ಮೈಸೋಂಕೇ ಅವರಿಗೆ ಆನಂದವನ್ನು ಉಂಟುಮಾಡುತ್ತಿದ್ದಿತು. ನಾನು ಮುಟ್ಟಿದರೆ ಅವರು ರೋಮಾಂಚಗೊಳ್ಳುತ್ತಿದ್ದರು. ನನ್ನ ಮಾತು ಅವರ ಕಿವಿಗೆ ಸವಿ ! ಅಯ್ಯೋ ಬನಶಂಕರಿ. ತಾಯಿ ಬನಶಂಕರೀ"

ಬನವನ ಮಾತುಗಳನ್ನು ಕೇಳಿದ ರಾಜನು ಬೇರೆ ಮಾರ್ಗವನ್ನು ಕಾಣದೆ ''ಹಾಗಾದರೆ ನಾನೂ ನಿನ್ನೊಂದಿಗೆ ಬರುತ್ತೇನೆ" ಎನ್ನುತ್ತ ಕತ್ತಿಯನ್ನು ಒರೆಯಿಂದ ಹಿರಿದುಕೊಳ್ಳುವುದರೊಳಗೆ ಯಾರೋ ದೂರದಿಂದ ಕೂಗಿದಂತಾಯಿತು.

''ಹಾ, ಹಾ, ತಡೆ ಮಹಾರಾಜ, ತಡೆ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಬನವನು ಚೇತರಿಸಿ ಕೊಳ್ಳುವನು. ಅವನ ತಾಯಿತಂದೆಗಳು ಈಗ ದೃಢಕಾಯರಾಗಿದ್ದಾರೆ, ಅವರಿಗೆ ಈಗ ಕಣ್ಣುಗಳು ಬಂದಿವೆ. ಇದು ಹೇಗಾಯಿತೆಂದು ಅವರಿಗೂ ಆಶ್ಚರ್ಯ, ಆನಂದ, ಕುತೂಹಲ ನೀನು ಬನವನನ್ನು ಒಡಗೊಂಡು ಹೋಗಿ ಆ ಬಡವರಿಗೆ ಶರಣು ಮಾಡಿ ಅರಮನೆಗೆ ಹೋಗು" ಎಂದು ಹೇಳಿದಂತಾಯಿತು. ಆ ಹೇಳಿಕೆ ಸುಳ್ಳಾಗಲಿಲ್ಲ.

ಬನವನೂ ಬದುಕಿದ; ರಾಜನೂ ಬದುಕಿದ; ಬನವನ ತಾಯಿತಂದೆಯರೂ ಅಧರಿಸಿ ಕಣ್ಣು ಪಡೆದು ಬದುಕಿದರು.

★

---

(22 ಪುಟ ದಿಂದ)

ಬಿಳಿಗಿರಿಯ ಅಗಮ್ಯ ಅರಣ್ಯ ಸಂಪತ್ತು ಸಾಗರದೋಪಾದಿಯಲ್ಲಿ ವಸುಂಧರೆ ಜಗಕ್ಕೆ ನೀಡಿದ ವರವಾಗಿದೆ.

ಸ್ಥಳ ಪುರಾಣಗಳಲ್ಲಿ ಸಿಗುವ ಆಧಾರಗಳಿಂದ ಪರುಶುರಾಮ ಮಾತೃ ಹತ್ಯ ದೋಷ ಪರಿಹಾರಕ್ಕಾಗಿ ಈ ಪರ್ವತದ ಮೇಲೆ ತಪಗೈದು ವಿರಾಜ ನದಿಯಿಂದ ಭಗವಂತನ ಪಾದಗಳನ್ನು ತೊಳೆದನೆಂದು, ಈ ನದಿಗೆ ನಂತರ ಭಾರ್ಗವಿ ನದಿಯೆಂದು ಕರೆಯಲ್ಪಟ್ಟಿತೆಂದು ತಿಳಿದು ಬಂದಿದೆ.

ಕೃತ ಯುಗದಲ್ಲಿ ವಿಶ್ವಾಮಿತ್ರನ ಕೋಪಕ್ಕೆ ತುತ್ತಾದ ವಶಿಷ್ಠ ಮಹರ್ಷಿಗಳು ತಮ್ಮ ಮಕ್ಕಳನ್ನೆಲ್ಲಾ ಕಳೆದುಕೊಂಡು ಶ್ವೇತಾದ್ರಿಗೆ ಬಂದು ಭಗವಂತನ ಸಾಕ್ಷಾತ್ಕಾರ ಪಡೆದು ಶಕ್ತಿ ಎಂಬ ಮಗುವನ್ನು ಪಡೆದನೆಂದು ವಶಿಷ್ಠರೇ ಶ್ರೀರಂಗನನ್ನು ಪ್ರತಿಷ್ಠೆ ಮಾಡಿದರೆಂದು ತಿಳಿದು ಬಂದಿದೆ.

ಭಸ್ಮಾಸುರನಿಗೆ ವರದಾನ ಮಾಡಿ ಅವನಿಂದಲೇ ವಂಚಿತನಾದ ರುದ್ರನ ರಕ್ಷಣೆಗಾಗಿ ಶ್ವೇತಾದ್ರೀಶನು ಮೋಹಿನಿ ರೂಪತಾಳಿ ಭಸ್ಮಾಸುರನನ್ನು ನಾಶಮಾಡಲು ರುದ್ರನು ಗಂಗಾಧರನೆಂಬ ನಾಮದಿಂದ ಈ ಸ್ಥಳದಲ್ಲಿಯೇ ನೆಲಸಿದ್ದಾಗಿಯೂ ತಿಳಿದುಬಂದಿದೆ.

ಮೇಲ್ಭಾಗದಲ್ಲಿ ಶ್ರೀರಂಗ ನೆಲಸಿದ್ದರೆ ಕೆಳಭಾಗದಲ್ಲಿ ಶ್ರೀ ಗಂಗಾಧರೇಶ್ವರ ನೆಲಸಿದ್ದಾನೆ.

ಪಂಥ ಭೇದಗಳಿಗೆ ದೇವನೊಬ್ಬನೇ ನಾಮ ಹಲವು ಎನ್ನುವಂತೆ, ಶಿವ ವಿಷ್ಣು ರೂಪಿಗಳಾದ ಬಿಳಿಗಿರಿರಂಗ ಗಂಗಾಧರೇಶ್ವರ ಬೆಟ್ಟದಲ್ಲಿ ನೆಲಸಿ ಹರಿಹರ ಶಕ್ತಿಗಳ ಸಮ್ಮಿಳನದಿಂದ ಮಾನವರಿಗೆ ಸಮನ್ವಯ ಧರ್ಮವನ್ನು ಬೀರುವ ಶಕ್ತಿ ಮೂರ್ತಿಗಳಾಗಿ ರಾರಾಜಿಸುತ್ತಿದ್ದಾರೆ.

ಧರ್ಮವೇನೆಂಬುದನ್ನು ಅರಿಯದ ಮಾನವ ದೈವದಲ್ಲಿ ಪಂಥವನ್ನು ಧರ್ಮದಲ್ಲಿ ಭೇದವನ್ನು ಮಾನವರಲ್ಲಿ ಜಾತಿಯನ್ನು ತನ್ನ ಸ್ವಾರ್ಥಕ್ಕೆ ರೂಪಿಸಿ ಆಳಲು ಬಾಳಲು ಹೊರಟಿದ್ದಾನೆ.

ಆದರೆ ಮಹಾತ್ಮರ ಮಹಿಮರ ಮಾ[illegible]ರ ದೃಷ್ಟಿಯಂತೆ ಧರ್ಮ ಒಂದೇ, ಜಾತಿ ಒಂದೇ, ನೀತಿ ಪಂಥಗಳೊಂದೇ ಎನ್ನುವ ಮಹೋದಯ ತತ್ವವು ಬಿಳಿಗಿರಿಯನ್ನು ನೋಡಿದಾಗ ಅರ್ಥವಾಗದೇ ಇರದು.

★

# ಅನುಗ್ರಹ ಭಾಷಣ

**ಬೆಂಗಳೂರು ಸಾಹಿತ್ಯ ಪರಿಷತ್ತಿನಲ್ಲಿ ತಾ|| ೩೦-೧೨-೭೭ ನೆಯ ಶುಕ್ರವಾರ ಲಿಂ| ನಾಗರತ್ನಮ್ಮ ಹಿರೇಮಠರವರ ಸ್ಮಾರಕ ಗ್ರಂಥ ಬಿಡುಗಡೆಯ ಸಮಾರಂಭದ ನೇತೃತ್ವ ವಹಿಸಿದಾಗ ಕೊಡಿಸಿದ ಅನುಗ್ರಹ ಭಾಷಣದ ಸಾರಾಂಶ**

ಲಿಂ. ಶ್ರೀಮತಿ ನಾಗರತ್ನಮ್ಮನವರು ಕರ್ನಾಟಕದಲ್ಲಿ ಜನಿಸಿ, ಚಿಕ್ಕ ವಯಸ್ಸಿನಲ್ಲಿಯೇ ದೇಶಪ್ರೇಮ ಬೆಳಸಿಕೊಂಡ ಪುಣ್ಯ ಸ್ತ್ರೀ ಎನಿಸಿದ್ದರು. ಸ್ವಾರ್ಥತ್ಯಾಗ ಮಾಡಿ ಸೆರೆಮನೆ ವಾಸವನ್ನು ಅನುಭವಿಸಿ ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಗಣನೀಯ ಸೇವೆ ಸಲ್ಲಿಸಿದ ಅವರ ಬಗೆಗೆ ಒಂದು ಸ್ಮಾರಕ ಗ್ರಂಥವನ್ನು ಹೊರ ತಂದಿರುವುದು ಔಚಿತ್ಯ ಪೂರ್ಣವಾದದ್ದು. ಅವರ ಶ್ರೇಷ್ಠ ಆದರ್ಶಗಳನ್ನೊಳಗೊಂಡ ಅನೇಕ ಜನರ ಬರವಣಿಗೆಗಳು ಮುಂದಿನ ಪೀಳಿಗೆಗೊಂದು ದಿಕ್ಸೂಚಿಯಾಗ ಬಲ್ಲವು. ಅವರ ಸೇವೆಯನ್ನು ಈ ದಿನದ ಸಭೆಯಲ್ಲಿರುವ ಅಂದಿನ ಸ್ವಾತಂತ್ರ್ಯಕ್ಕೆ ಹೋರಾಟದಲ್ಲಿ ಭಾಗವಹಿಸಿದ್ದ ಶ್ರೀಮಾನ್ ನಿಜಲಿಂಗಪ್ಪನವರು, ಶ್ರೀ ಟಿ. ಸಿದ್ಧಲಿಂಗಯ್ಯನವರು, ಶ್ರೀ ಪಟ್ಟಾಭಿರಾಮಯ್ಯನವರು ಸ್ಮರಿಸಿದ್ದಾರೆ, ಕೊಂಡಾಡಿದ್ದಾರೆ. ಪ್ರತ್ಯಕ್ಷ ಕಂಡ ಅವರೇ ಮಾಡಿದ ಶ್ಲಾಘನೆಗಿಂತ ಬೇರೆಯವರು ಹೇಳಬೇಕಾದ್ದೇನಿದೆ. ಶ್ರೀ ನಿಜ ಲಿಂಗಪ್ಪನವರು, ಅವರ ಬಗೆಗೆ ಗೌರವದ ಮಾತನಾಡಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ನಾವು ಜಗತ್ತಿನಲ್ಲಿ ಆತ್ಮ ಗೌರವದಿಂದ ಬಾಳುವಂತಾಗಿದೆ. ಇಂದು ಭಾರತದಲ್ಲಿ ಸ್ವಾತಂತ್ರ್ಯ ಸಂಪಾದಿಸುವಾಗಿದ್ದ ಜನರ ಮನೋಭಾವ ಸ್ವಲ್ಪ ಮಟ್ಟಿಗೆ ಕುಂಠಿತಗೊಂಡಿದೆ. ಅಧಿಕಾರ, ಸಂಪತ್ತು, ಭೋಗ ಜೀವನದ ದಾಹ ಬೆಳೆಯುತ್ತಿದೆ. ಇದರಿಂದ ರಾಷ್ಟ್ರದ ಉನ್ನತಿಗೆ ಧಕ್ಕೆಯುಂಟಾಗಿದೆ. ಈ ಆಸೆ ಮನುಷ್ಯನನ್ನು ರಾಕ್ಷಸನನ್ನಾಗಿ ಮಾಡಿದೆ. ಎಂಥ ಹೇಯಕೃತ್ಯಕ್ಕೂ ನಾಚದವನನ್ನಾಗಿ ಮಾಡಿದೆ. ಇದು ರಾಷ್ಟ್ರ ವಿನಾಶ ಮಾರ್ಗ. ಅಧಿಕಾರ ವಹಿಸುವ ಮನುಷ್ಯ ನಿಜವಾಗಿ ತತ್ತ್ವ ಜ್ಞಾನಿಯಾಗಬೇಕು. ಸಮದರ್ಶಿಯಾಗಬೇಕು. ಆಗಲೇ ಅವರಿಗೆ ಅಧಿಕಾರದ ಅರ್ಥವಾಗುತ್ತದೆ. ಉಳಿದವರಿಗೆ ಅರ್ಥವಾಗುವುದು ಕಷ್ಟ. ವ್ಯಕ್ತಿ ಮುಖ್ಯವಲ್ಲ ರಾಷ್ಟ್ರ. ಇತ್ಯಾದಿ ವಿವರಿಸುತ್ತ ಧರ್ಮಜ್ಞಾನದ ಭೋಜನ ಕಥೆಯನ್ನು ಪರಿಣಾಮಕಾರಿಯಾಗಿ ತಿಳಿಸಿದರು. ಅಶಾಶ್ವತ ಭೋಗ ಭಾಗ್ಯಗಳನ್ನು ನಂಬಿ ಮನುಷ್ಯ ಹಾಳಾಗುವನೆಂದೂ, ಭೋಗ ಭಾಗ್ಯಗಳ ಆಸೆಯುಳ್ಳವನು ಅಧಿಕಾರವನ್ನು ವಹಿಸಬಾರದೆಂದೂ ತಿಳಿಸಿ, ನಿಸ್ವಾರ್ಥ ಸೇವೆಯಿಂದಲೇ ರಾಷ್ಟ್ರೋನ್ನತಿ ಯೆಂಬಂಶವನ್ನು ಮನಮುಟ್ಟುವಂತೆ ವಿವರಿಸಿದರು. ಲಿಂಗೈಕ್ಯ ನಾಗರತ್ನಮ್ಮ ಭೋಗ ಭಾಗ್ಯಗಳನ್ನು ತೃಣೀಕರಿಸಿ ಸೇವೆಗಾಗಿ ಸೇವೆ ಮಾಡಿದ ಪುಣ್ಯ ಶರೀರಿ ಎಂದು ಅಪ್ಪಣೆ ಕೊಡಿಸಿದರು.



# ಕ್ಷೇತ್ರ ವಾರ್ತೆ

ಸಂಸ್ಕೃತ ಭಾಷೆ ಭರತ ಖಂಡದ ಅಮೂಲ್ಯ ಆಸ್ತಿ. ಪ್ರಾಚೀನ ಕಾಲದಲ್ಲಿ ಅದರ ಉಳಿವು-ಬಳವುಗಳು ಅರಮನೆ-ಗುರುಮನೆಗಳಿಗೆ ಸೇರಿತ್ತು. ಇಂದು ಆ ಜವಾಬ್ದಾರಿಯನ್ನು ಸರ್ಕಾರ ಹೊತ್ತಿದೆ. ಅದರ ಪ್ರಚಾರ ಪ್ರಗತಿಗಾಗಿ ಅದು ವಿವಿಧ ಯೋಜನೆಗಳನ್ನು ರೂಪಿಸಿಕೊಂಡಿದೆ. ಅಂತಹುಗಳಲ್ಲಿ ಸಂಸ್ಕೃತ ದಿನೋತ್ಸವವೂ ಒಂದು. ಪ್ರತಿ ವರ್ಷವೂ ಶ್ರಾವಣ ಪೌರ್ಣಮಿಯಂದು ಆಚರಿಸುವಂತೆ ಸರ್ಕಾರ ಶಾಲಾ-ಕಾಲೇಜುಗಳಿಗೆ ಆದೇಶ ನೀಡಿದೆ. ಅದರಂತೆ ಶ್ರೀ ಕ್ಷೇತ್ರದ ಸಂಸ್ಕೃತ ಕಾಲೇಜಿನ ವತಿಯಿಂದ ಪ್ರತಿ ವರ್ಷವೂ ದಿನೋತ್ಸವವನ್ನು ಆಚರಿಸಲಾಗುತ್ತಿದೆ.

ಪ್ರಸಕ್ತ ಸಾಲಿನ ಸಂಸ್ಕೃತ ದಿನೋತ್ಸವವನ್ನು ಡಿಸೆಂಬರ್ ಮಾಹೆ 29 ರಂದು ವಿಜೃಂಭಣೆಯಿಂದ ಆಚರಿಸಲಾಯಿತು. ಉಷಃ 5 ಗಂಟೆಯಿಂದ ಆರಂಭವಾದ ಕಾರ್ಯಕ್ರಮಗಳು ರಾತ್ರಿ 8 ಗಂಟೆಯವರೆಗೆ ಜರುಗಿದುವು. ಪ್ರಭಾತಭೇರಿ' ವಿದ್ಯಾರ್ಥಿಗಳ ಮೆರವಣಿಗೆ, ಧ್ವಜಾರೋಹಣೆ, ಪುಸ್ತಕ ಪ್ರದರ್ಶನ; ಉದ್ಘಾಟನಾ ಸಮಾರಂಭ; ಪ್ರಬಂಧ-ವಾಕ್ಯಾರ್ಥ ಗೋಷ್ಠಿಗಳು, ಸಾರ್ವಜನಿಕರ ಸಭೆ—ಇವು ಅಂದಿನ ಕಾರ್ಯಕ್ರಮದ ಅಂಗಗಳಾಗಿದ್ದುವು. ಬೆಳಗಿನ ಕಾರ್ಯಕ್ರಮಗಳು ಶ್ರೀ ಶ್ರೀ ಗಳವರ ದಿವ್ಯ ನೇತೃತ್ವದಲ್ಲಿ ನಡೆದುವು. ಅಧ್ಯಕ್ಷರಾಗಿ ತುಮಕೂರು ಜಿಲ್ಲೆಯ ವಿದ್ಯಾಧಿಕಾರಿಗಳಾದ ಶ್ರೀ ಹನುಮಯ್ಯ M. Com., M. Ed., ರವರು, ಅತಿಥಿಯಾಗಿ ಪ್ರಥಮ ಅಧಿಕ ಸಿವಿಲ್ ನ್ಯಾಯಾಧೀಶರಾದ ಶ್ರೀಮಾನ್ ಸಿದ್ದಪ್ಪ, BSc., B. L., ರವರೂ ಆಗಮಿಸಿದ್ದರು.

ಅಪರಾಹ್ನದ ಗೋಷ್ಠಿಯು ಶ್ರೀ ವಿದ್ವಾನ್ ವೈ. ವಿಶ್ವನಾಥಶಾಸ್ತ್ರಿಗಳವರ ಘನ ಅಧ್ಯಕ್ಷತೆಯಲ್ಲಿ ನಡೆಯಿತು. ಬೆಂಗಳೂರು ವಿ. ವಿ. ಸಂಸ್ಕೃತ ವಿಭಾಗದ ಪ್ರಾಧ್ಯಾಪಕರಾದ ಶ್ರೀ ಕೆ. ಟಿ. ಪಾಂಡುರಂಗಿ ಎಂ. ಎ. ರವರು ಉಪಸ್ಥಿತರಿದ್ದರು. ಅನೇಕ ವಿದ್ವಾಂಸರೂ ಆ ಸುಹೃದ್ಗೋಷ್ಠಿಯಲ್ಲಿ ಭಾಗವಹಿಸಿದ್ದರು. ನಾಲ್ಕು ಶಾಸ್ತ್ರಗಳಲ್ಲಿ ವಾಕ್ಯಾರ್ಥ ಮತ್ತು ವಿದ್ವಾಂಸರಿಬ್ಬರಿಂದ ಪ್ರಬಂಧ ನಿರೂಪಣೆ ನಡೆಯಿತು. ಅಂತ್ಯದಲ್ಲಿ ಶ್ರೀ ಪಾಂಡುರಂಗಿಯವರ ಸಲಹೆ ಹಾಗೂ ಅಧ್ಯಕ್ಷರ ವ್ಯಾಖ್ಯಾನದೊಂದಿಗೆ ಗೋಷ್ಠಿಯು ಮುಕ್ತಾಯವಾಯಿತು.

ಅಂದಿನ ಕೊನೆಯ ಕಾರ್ಯಕ್ರಮವಾದ ಸಾರ್ವಜನಿಕ ಸಭೆಯು ಸಂಜೆ ಆರು ಗಂಟೆಗೆ ಆರಂಭವಾಯಿತು. ಶ್ರೀ ಶ್ರೀ ಗಳವರು ಪೂಜ್ಯ ನೇತೃತ್ವವನ್ನು ವಹಿಸಿದ್ದರು. ನಿವೃತ್ತ ನ್ಯಾಯಾಧೀಶರಾದ ಎಸ್. ವಿ. ಮಳೀಮಠರವರು ಅಧ್ಯಕ್ಷ ಪೀಠವನ್ನು ಅಲಂಕರಿಸಿದ್ದರು. ಸಂಸ್ಕೃತ ಬಲ್ಲವರು ಅಧ್ಯಕ್ಷರಾಗಿದ್ದುದು ಸಭೆಗೊಂದು ಅಪೂರ್ವ ಮೆರಗನ್ನು ಉಂಟುಮಾಡಿತ್ತು. ಅತಿಥಿಗಳಾಗಿ ಶ್ರೀ ಮಠದ ಹಳೆಯ ವಿದ್ಯಾರ್ಥಿ ಡಾ|| ಶ್ರೀ ಜಿ. ಮರುಳು ಸಿದ್ಧಯ್ಯ ಮತ್ತು ಕೆ. ಟಿ. ಪಾಂಡುರಂಗಿಯವರು ಆಗಮಿಸಿದ್ದರು.

ಸಮಾರೋಪ ಭಾಷಣ ಮಾಡುತ್ತಾ, ಸಂಸ್ಕೃತದ ಅಭಿವೃದ್ಧಿಯ ಬಗ್ಗೆ ಅಮೂಲ್ಯ ಸಲಹೆಗಳನ್ನು ಅವರಿಬ್ಬರೂ ಕೊಟ್ಟರು. ಸಂಸ್ಕೃತದ ಸಂದ ಗತವೈಭವ-ಸದ್ಯದ ಅಧೋಗತಿಯನ್ನು ಕುರಿತು ಹೃದಯದ ನೊಂದ ನುಡಿಗಳನ್ನು ಆಡಿದರು ಶ್ರೀ ಮರುಳಸಿದ್ಧಯ್ಯನವರು. ಶ್ರೀ ಗುರುಕುಲ ಪದ್ಧತಿಯಲ್ಲಿ ಕಂಡು ಬರುತ್ತಿದ್ದ ಸಂಸ್ಕೃತದ ಚಿನ್ನದ ಬೆಳಸನ್ನು ಸ್ಮರಣೆಗೆ ತಂದುಕೊಂಡ ಶ್ರೀ ಪಾಂಡುರಂಗಿಯವರು ‒'ವಿಶ್ವಹಿಂದೂ ಪರಿಷತ್ತಿನ ಸ್ಮರಣ ಸಂಚಿಕೆಯೊಂದರಲ್ಲಿ ಶ್ರೀ ಸಿದ್ಧಗಂಗಾ ಗುರುಕುಲವನ್ನು ಸು. ಒಂದು ಪುಟದಲ್ಲಿ ಉಲ್ಲೇಖಿಸಿರುವುದನ್ನು ಪ್ರಸ್ತಾಪ ಮಾಡಿದರು. ಅಧ್ಯಕ್ಷರು ಸಂಸ್ಕೃತ ಭಾಷಾ ಮಹತಿಯನ್ನು ಮನದಟ್ಟಾಗಿ ತಿಳಿಸಿದರು. ಕೊನೆಯಲ್ಲಿ ಶ್ರೀ ಶ್ರೀ ಗಳವರು ತಮ್ಮ ಉಪದೇಶವಾಣಿಯಲ್ಲಿ ಸಂಸ್ಕೃತದ ಮಹತ್ವವನ್ನು ಬೋಧಿಸಿದರು. ನಂತರ ಮಂಗಳ ಗೀತೆಯೊಡನೆ ಮುಕ್ತಾಯವಾಯಿತು.

(‒ಸಂ. ಕೋ. ರಂ. ಬ.)

ಶ್ರೀ ಗಳವರ ಉಪದೇಶದ ವಿಚಾರಕ್ಕೆ 'ಶ್ರೀವಾಣಿ' ನೋಡಿ ]

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ